ಏಕಾಂತದಲ್ಲಿ ಆನಂದ ಮನಸ್ಕನಾಗಿ ಇದ್ದಾಗ ಈ ನನ್ನ ಪತ್ರವನ್ನು ನೀಡು. ಕೆಲಸ ಕೆಡುವುದಕ್ಕಿಂತ ತಡವಾಗಿ ಆದರೂ ಕೆಲಸ ಕೈಗೂಡುವುದೇ ಒಳ್ಳೆಯದು ಎಂಬ ಅರ್ಥದಲ್ಲಿ ''ಕಾರ್ಯಾಸಿದ್ಧೇರಪಿ ವರತರಾ ಕಾರ್ಯಸಿದ್ಧಿರ್ವಿಲಂಬಾತ್'' ಎಂದು ಕೊನೆಯದಾಗಿ ವರ್ಣಿಸಿದ್ದಾರೆ.

**ಉತ್ತರಸಂದೇಶ**

ರುಕ್ಮಿಣೀದೇವಿಯ ಪತ್ರದ ಒಳಗೆ ಏನಿರಬಹುದು ? ಅವಳ ಒಕ್ಕಣೆ ಹೇಗಿತ್ತು ? ಇದರಿಂದ ಆರಂಭಿಸಿದ್ದಾರೆ ಪೂಜ್ಯ ಆಚಾರ್ಯರು. ''ಹೇ ಶ್ರೀಕೃಷ್ಣ ನೀನು ಎನಗೆ ಪ್ರಿಯತಮ'' ಎಂದು ಹೇಳಿದರೆ ಜಾರೆಯರಾಡುವ ಮಾತಿನ ಧೀಟು ಆದೀತು. ''ಕಾಮದಿಂದ ಬಳಲಿದ್ದೇನೆ'' ಎಂದರೆ ನನ್ನ ಕಾಲುಷ್ಯವು ವ್ಯಕ್ತವಾಗುತ್ತದೆ. ನಾನಾಗಿಯೇ ನಿನ್ನ ಬಳಿಗೆ ಬರುವೆನೆಂದು ಹೇಳದೇ ಇರುವುದರಿಂದ ನನ್ನ ಮೇಲೆ ಪ್ರೀತಿ ಇದೆಯೋ ಇಲ್ಲವೋ ಎಂಬ ಶಂಕೆ ನಿನಗೆ ಬರಬಹುದು. ಆದ್ದರಿಂದ ಸ್ತ್ರೀಯರಿಗೆ ಸಹಜವಾಗಿ ಬಂದಿರುವ ಲಜ್ಜೆ ಇರುವುದರಿಂದ ಶ್ರೀಕೃಷ್ಣನೇ ನಿನಗೆ ಹೇಗೆ ಪತ್ರವನ್ನು ಪ್ರಾರಂಭಿಸಬೇಕು ಎಂದು ತಿಳಿಯದು ಎಂದು ಹೀಗೆ ಆಚಾರ್ಯರು ರುಕ್ಮಿಣಿಯ ಪತ್ರವನ್ನು ಪ್ರಾರಂಭಿಸಿದ್ದಾರೆ. ಇದನ್ನು ಈ ಪದ್ಯದಲ್ಲಿ

**ತ್ವಂ ಮೇ ಪ್ರೇಯಾನಿತಿ ನಿಗದನಂ ಸ್ವೈರಿಣೀವಾಗ್ವಿಲಾಸಃ**
**ದೂಯೇ ಕಾಮಾದಿತಿ ಚ ಕಲುಷಾವಿಷ್ಕೃತಿರ್ಧಾಷ್ಟ್ಯರೀತಿಃ ।**
**ಆಗಚ್ಛಾಮಿ ಸ್ವಯಮಿತಿ ಹರೇಽನುಕ್ತಿತೋಽಪ್ರೀತಿಶಂಕಾ**
**ಬಾಲ್ಯಂ ಲಜ್ಜಾಸಹಜಲಸಿತಂ ಕಿಂ ತವಾವೇದನೀಯಂ ॥ ಎಂದು ವರ್ಣಿಸಿದ್ದಾರೆ.**

ಇನ್ನೂ ಅನೇಕ ಮಧುರ ಸಂಭಾಷಣೆಯನ್ನು ಈ ಸಂದೇಶದಲ್ಲಿ ಕಾಣಬಹುದು.

''ಕೃಷ್ಣಾಥಾಪಿ ಸ್ಫುರತಿ ಹೃದಯಂ ತತ್ರ ಹೇತುಂ ನ ಜಾನೇ'' ಎಂದು ಹೇತೂತ್ಪ್ರೇಕ್ಷೆಯನ್ನು ಮಾಡಿರುವ ರೀತಿ ಬಹಳ ಸೊಗಸಾಗಿದೆ. ಈ ಸಂದರ್ಭಕ್ಕೆ ತಕ್ಕ ಮಾತನ್ನು ಆಚಾರ್ಯರು ಇಲ್ಲಿ ಹೇಳಿದ್ದಾರೆ. ರುಕ್ಮಿಯು ನೀ ಅಲ್ಲದ ಅನ್ಯಜನಕ್ಕೆ ಮೈಮಾತ್ರ ಉಳಿದ ನನ್ನನ್ನು ಕೊಡಲು ಹೊರಟಿದ್ದಾನೆ. ಕೃಷ್ಣನಿಗೆ ಸೇರಬೇಕಾದ ನನ್ನ ದೇಹವು ಬೆಂಕಿಗೆ ಆಹುತಿಯಾದಂತೆ ಆಗುವುದು. ಕೃಷ್ಣನಿಲ್ಲದೇ ಪ್ರಾಣ ಉಳಿಸಿಕೊಳ್ಳಲು ಯಾರಿಗೆ ಮನಸ್ಸು ಬರುತ್ತದೆ. ಆದಕಾರಣ ನೀನೇ ಎನಗೆ ಪ್ರಾಣನಾಥ. ನನ್ನನ್ನು ರಕ್ಷಿಸು ಎಂದು ರುಕ್ಮಿಣಿಯ ಮಾತನ್ನು ಆಚಾರ್ಯರು ಹೀಗೆ ಶ್ರೇಷ್ಠಶಬ್ದಜೋಡಣೆಯಿಂದ ವರ್ಣಿಸಿದ್ದಾರೆ.

**ರಾಕಾಯಾಮೇ ಶಶಧರ ಇವ ಪ್ರಾಣನಾಥಸ್ತ್ವಮೇವ**

ರುಕ್ಮಿಣಿಯ ವಿಲಾಪವನ್ನು ಪೂಜ್ಯ ಆಚಾರ್ಯರು ಅಲಂಕಾರಗರ್ಭಿತವಾಗಿ ಚೇತೋಹಾರಿಯಾಗಿ ವಿವರಿಸಿದ್ದಾರೆ.

**ಹರ್ಮ್ಯೇ ಕೃಷ್ಣಃ ದಿಶಿದಿಶಿ ಪುರಃಪೃಷ್ಠತಶ್ಚಾಪಿ ಕೃಷ್ಣಃ**
**ತಲ್ಪೇ ಕೃಷ್ಣಃ ಪಥಿ ಪಥಿ ಪಥಿ ಮನೋಮಂದಿರೇ ಕೃಷ್ಣಕೃಷ್ಣಃ ।**
**ಸರ್ವಃ ಕೃಷ್ಣಃ ಭವತಿ ನಿತರಾಂ ಚಿಂತನಾಜ್ಜುಷ್ಟಕೃಷ್ಣಾತ್**
**ನಾಹಂ ಕೃಷ್ಣಾ ಭವಮಪಿ ಪರಂ ಪಾಂಡುರಾಸ್ಮೀತಿ ಚಿತ್ರಂ ॥**

ಮಹಡಿಮನೆಯಲ್ಲಿ ಕೃಷ್ಣ ದಶದಿಕ್ಕಿನಲ್ಲಿ ಕೃಷ್ಣ ಹಿಂದೆ ಕೃಷ್ಣ ಮುಂದೆ ಕೃಷ್ಣ ಹಾಸಿಗೆಯಲ್ಲೂ ಕೃಷ್ಣ ಹೀಗೆ ನಿತ್ಯ ಕೃಷ್ಣಚಿಂತನೆಯಲ್ಲಿ ನನಗೆ ಸರ್ವಸ್ವವೂ ಕೃಷ್ಣಮಯವಾಗಿದೆ. ನಾನು ಮಾತ್ರ ಕಪ್ಪು ಆಗಲಿಲ್ಲ, ಮತ್ತಷ್ಟು ಬಿಳಿಚಿಕೊಳ್ಳುತ್ತಿದ್ದೇನೆ. ಇದು ಬಹಳ ವಿಚಿತ್ರ. ಇದೇ ರೀತಿಯಾಗಿ ಅನೇಕ ರೀತಿಯ ವಿಲಾಪಾದಿಗಳನ್ನು ಪೂಜ್ಯ ಆಚಾರ್ಯರು ಹೃದಯಂಗಮವಾಗಿ ವಿವರಿಸಿದ್ದಾರೆ.

ಕೊನೆಗೆ ರುಕ್ಮಿಣಿಯ ಪ್ರತಿಜ್ಞೆಯನ್ನು ಪೂಜ್ಯ ಆಚಾರ್ಯರು ''ನೀನು ನನ್ನನ್ನು ಸ್ವೀಕರಿಸದೇ ಇದ್ದಲ್ಲಿ ನಾನು ನಿನ್ನನ್ನೇ ನಿರೀಕ್ಷಿಸುತ್ತ ಮನದೊಳಗೆ ನೂರಾರು ಚಿಂತೆಯಿಂದ ಆವೃತಳಾಗಿ ಎಲ್ಲವನ್ನೂ ತ್ಯಜಿಸಿ ಪ್ರಾಣವನ್ನು ಬಿಡುತ್ತೇನೆ. ವೇದಗಳು ಜ್ಞಾನಿಗಳು ನಿನ್ನನ್ನು ಕಾರುಣ್ಯಮೂರ್ತಿ ಎಂದು ಹೇಳಿರುವುದರಿಂದ ನಿರ್ದಯನಾಗಲಾರೆ ಎಂದು ನಂಬಿರುತ್ತೇನೆ'' ಎಂದು ರುಕ್ಮಿಣಿಯ ವಿಲಾಪ-ವನ್ನು ಗಂಭೀರ ಶಬ್ದಗಳಿಂದ ಹೇಳಿದ್ದಾರೆ.

''ವೈರಾಗ್ಯಾದ್ಯೈಃ'' ಎಂದು ಆಚಾರ್ಯರು ಪ್ರಸಿದ್ಧರಾದ ಲೋಕವಿಖ್ಯಾತರಾದ ತೀರ್ಥ-ರೂಪರಾದ ಸಾತ್ವಿಕ ಗುರುರಾಜಾಚಾರ್ಯರನ್ನು ಸ್ಮರಿಸಿ ವಿದ್ಯೆಗೆ ಗುರುಗಳಾದ ಯತಿಚಕ್ರ-ಚೂಡಾಮಣಿಗಳಾದ 1008 ಪ್ರಾತಃಸ್ಮರಣೀಯ ಶ್ರೀಸತ್ಯಧ್ಯಾನತೀರ್ಥ ಶ್ರೀಪಾದಂಗಳವರನ್ನು ವಂದಿಸಿ ಅವರಿಬ್ಬರ ದ್ವಾರಾ ಪರಮಾತ್ಮನಿಗೆ ಈ ಕಾವ್ಯಮಾಲೆಯನ್ನು ಅರ್ಪಣ ಮಾಡಿದ್ದು ಮನನೀಯವಾಗಿದೆ.

## ಪ್ರಕೃತ ಕಾವ್ಯದ ಕವಿಗಳು

ಪರಮಪೂಜ್ಯಪಂಡಿತರಾದ ಶ್ರೀಜಾಲೀಹಾಳ ಶ್ರೀನಿವಾಸಾಚಾರ್ಯರು ಈ ಕಾವ್ಯದ ಕವಿಗಳು. ಶ್ರೋತ್ರೀಯ ಗೃಹಸ್ಥಾಶ್ರಮಿಗಳ ಮಧ್ಯದಲ್ಲಿ ಸರ್ವತೋಮುಖಶ್ರೇಷ್ಠಸಾಧಕರಾದ ಈ ಶತಮಾನದ ಮಹಾಶಕಪುರುಷರು. 1915ರಲ್ಲಿ ಜನಿಸಿದ ಪೂಜ್ಯ ಆಚಾರ್ಯರದು ಕೌಶಿಕಗೋತ್ರ. ವಿದ್ವತ್‌ಪ್ರಪಂಚದಲ್ಲಿ ವಿಖ್ಯಾತವಾದ ಶ್ರೀಮನ್ನ್ಯಾಯಸುಧಾ ಟೀಕೆಗೆ ಟಿಪ್ಪಣಿ ಬರೆದಿರುವಂತಹ ವಂಶದಲ್ಲಿ ಜನನ. ಪೂಜ್ಯ ಸಾತ್ವಿಕ ಗುರುರಾಜಾಚಾರ್ಯ ಯಮುನಾಬಾಯಿದಂಪತಿಗಳ ಶ್ರೇಷ್ಠಜ್ಯೇಷ್ಠಪುತ್ರರು. ಸಕಾಲಕ್ಕೆ ಉಪನಯನ, ತಂದೆಗಳಾದ ಸಾತ್ವಿಕಾಚಾರ್ಯರಲ್ಲಿ ಕಾವ್ಯ, ವ್ಯಾಕರಣ, ಅಮರಕೋಶ, ವೇದಗಳ ಆಳವಾದ ಅಧ್ಯಯನ. ಪೂಜ್ಯ ಆಚಾರ್ಯರ ತೀಕ್ಷ್ಣಬುದ್ಧಿಯನ್ನು ಗುರುತಿಸಿದ ಪ್ರಾತಃಸ್ಮರಣೀಯರಾದ ಉತ್ತರಾದಿ ಮಠಾಧೀಶ್ವರರಾದ ಶ್ರೀಸತ್ಯಧ್ಯಾನತೀರ್ಥಶ್ರೀಪಾದಂಗಳವರು ಆಚಾರ್ಯರನ್ನು ಮಠಕ್ಕೆ ಕರೆದುಕೊಂಡು ಹೋಗಿ ವೇದಾಂತಶಾಸ್ತ್ರವನ್ನು ಹೇಳಲು ಪ್ರಾರಂಭಿಸಿದರು. ಶ್ರೀಮಠದಲ್ಲಿ ಪೂಜ್ಯ ಆಚಾರ್ಯರು

ಪಾಂಡುರಂಗಿ ಕೃಷ್ಣಾಚಾರ್ಯರೆಂಬ ದಿಗ್ಗಜರಲ್ಲಿ ನ್ಯಾಯಶಾಸ್ತ್ರವನ್ನು ಓದಿದರು. ನಂತರ ವರಖೇಡಿ ನರಸಿಂಹಾಚಾರ್ಯರೆಂಬ ಹೆಸರುಳ್ಳ (ಕಾಕಾ ಎಂದು ಪ್ರಸಿದ್ಧರಾದ) ಶ್ರೇಷ್ಠಪಂಡಿತರನ್ನು ಆಶ್ರಯಿಸಿದರು. ಶ್ರೀಸತ್ಯಧ್ಯಾನತೀರ್ಥರ ಶಿಷ್ಯರಾದ ನರಸಿಂಹಾಚಾರ್ಯರು ಆಚಾರ್ಯರಿಗೆ ಚಿಂತಾಮಣಿ ಮೊದಲಾದ ಗ್ರಂಥಗಳನ್ನು ಪಾಠ ಹೇಳಿದರು. ಆದರೆ ಎಲ್ಲೆಡೆ ಪ್ರಸಿದ್ಧರಾದ ನ್ಯಾಯಶಾಸ್ತ್ರದಲ್ಲಿ ನಿಪುಣರಾದ ಹಾಗೂ ಅನೇಕ ಸಭೆಗಳಿಗೆ ಹೋಗುವ ನರಸಿಂಹಾಚಾರ್ಯರು ಒಂದು ಸಾರಿ ಆಚಾರ್ಯರಿಗೆ ಹೇಳಿದರು. ''ನಾನು ಯಾವಾಗಲೂ ಸಭೆಯನ್ನು ಕುರಿತು ಹೋಗುವೆನು. ನಿನಗೆ ಪಾಠವು ಸ್ವಲ್ಪವೇ ಆಗುತ್ತಿದೆ ಎಂದು ಭಾವಿಸುವೆ. ಆದ್ದರಿಂದ ಕಾಶಿಯನ್ನು ಕುರಿತು ಹೋಗು. ಅಲ್ಲಿ ತಡೆ ಇಲ್ಲದೇ ತರ್ಕಶಾಸ್ತ್ರವನ್ನು ಓದು. ಕಾಶಿಯಲ್ಲಿ ಶ್ರೇಷ್ಠತಾರ್ಕಿಕನಾದ, ಅಪಾರವಿದ್ಯೆಯಲ್ಲಿ ಶ್ರೀಮಂತನಾಗಿರುವ, ಸಭೆಯಲ್ಲಿ ಬಹಳ ಕೀರ್ತಿವಂತನಾದ ಹಾಗೂ ನನಗೆ ಮಿತ್ರನಾದ ಬಾಲಕೃಷ್ಣ ಮಿಶ್ರ ಎಂಬ ಪಂಡಿತನು ಇದ್ದಾನೆ. ಅವನ ಹತ್ತಿರ ಹೋಗು'' ಎಂದರು. ಗುರುಗಳ ಆಜ್ಞೆಯನ್ನು ಶಿರಸಾವಹಿಸಿದವರಾಗಿ ಆಚಾರ್ಯರು ಕಾಶಿಗೆ ಹೋಗಿ ಬಾಲಕೃಷ್ಣಮಿಶ್ರ ಪಂಡಿತರನ್ನು ಹೊಂದಿದರು. ಅಲ್ಲಿ ಶ್ರೇಷ್ಠತರ್ಕಗಳನ್ನು ಕೂಡಲೇ ಓದಿದರು. ತರ್ಕಶಾಸ್ತ್ರ ಎಂಬ ಸಮುದ್ರದಲ್ಲಿ ತಿಮಿಂಗಿಲದಂತೆ ಆದರು. ಇದೇ ರೀತಿಯಾಗಿ ಮೀಮಾಂಸಾಶಾಸ್ತ್ರದಲ್ಲಿ ನಿಪುಣ-ರಾದರು. ಕಾವ್ಯದಲ್ಲಿ ಮತ್ತು ಶ್ರೇಷ್ಠ ಗದ್ಯದಲ್ಲಿ ಬಾಣಭಟ್ಟನಂತೆ ಕಂಡರು. ಇವರ ಪ್ರತಿಭೆಗೆ ಪಂಡಿತಮಂಡಳಿಯು ಸೋತಂತೆ ತೋರುತ್ತಿತ್ತು.

ಬಾಲಸಿಂಹದಂತೆ ಇರುವ ಆಚಾರ್ಯರು ಪೂನಾಸಭೆಗೆ ಹೋದರು. ಅಲ್ಲಿ ಕೋಟಿಕ್ರಮ-ಗಳಿಂದ ಪಂಡಿತರಿಗೆ ಆನಂದವನ್ನು ಕೊಡತಕ್ಕವರಾದರು. ಅಂತಹ ತೀಕ್ಷ್ಣ ತರ್ಕರಾಶಿಯುಳ್ಳ ಆಚಾರ್ಯರನ್ನು ನೋಡಿ ಪಂಡಿತರು ಗೌರವಿಸಿದರು. ಆಚಾರ್ಯರು ''ಸಾಹಿತ್ಯಕೋವಿದ'', ''ತರ್ಕಚೂಡಾಮಣಿ'' ಎಂಬ ಬಿರುದುಗಳನ್ನು ಪಡೆದರು. ಬರೋಡಾಕ್ಷೇತ್ರದಲ್ಲಿ ನಡೆದ ಪರೀಕ್ಷೆಯಲ್ಲಿ ಜಯವನ್ನು ಹೊಂದಿದವರಾಗಿ 'ನ್ಯಾಯರತ್ನಂ' ಎಂಬ ಅಭಿಧಾನವನ್ನು ಪಡೆದರು. ಚೆನ್ನಾಗಿ ಅದ್ವೈತಸಿದ್ಧಾಂತದಲ್ಲಿ ಪರಿಶ್ರಮವನ್ನು ಪಟ್ಟು ಹಾಗೂ ಅನೇಕಶಾಸ್ತ್ರಗಳಲ್ಲಿ ನಿಪುಣತೆಯನ್ನು ಪಡೆದು ಕಾಶಿಯಲ್ಲಿ ಜಯವನ್ನು ಗಳಿಸಿ 'ಪಂಡಿತರಾಜ' ಎಂಬ ಪ್ರಸಿದ್ಧ ಹೆಸರನ್ನು ಪಡೆದರು. ಆಚಾರ್ಯರು ಗಂಭೀರ ನುಡಿಗಳಿಂದ ಕೂಡಿರುವ 'ಮಾಧುರೀ' ಎಂಬ ಗದ್ಯವನ್ನು ಬರೆದರು. ಉಜ್ಜಯನೀ ಸಭೆಯಲ್ಲಿ ಕವಿಗಳಿಂದ ಸನ್ಮಾನಿತರಾದರು. ಔಂಧಸಭೆಯಲ್ಲಿ ನಾಗೇಶ ಎಂಬ ಪಂಡಿತರನ್ನು ಕಂಡು ಪಂಚಲಕ್ಷಣೀ ಎಂಬ ಗ್ರಂಥದಿಂದ ಸಂತೋಷಪಡಿಸಿದವರಾಗಿ ವಿಶೇಷ ದಕ್ಷಿಣೆ-ಗೌರವಾದರಗಳನ್ನು ಪಡೆದರು. ವಿದ್ವತ್‌ವರಿಷ್ಠರಾದ ಬಾಲಕೃಷ್ಣಮಿಶ್ರರು ಆಚಾರ್ಯರನ್ನು ಎಲ್ಲ ತರ್ಕಸಾರಗಳಲ್ಲಿ ಪರೀಕ್ಷಿಸಿ ಆಶ್ಚರ್ಯಮನಸ್ಕರಾಗಿ ಮುಂದೆ ನಿನ್ನಂಥ ತರ್ಕಭಟ್ಟಾರಕನು ಹುಟ್ಟುವುದಿಲ್ಲ ಎಂದು ಹೇಳಿದರು. ಕಾಶೀಕ್ಷೇತ್ರದಲ್ಲಿ ವಿಚಾರಗಳೆಂಬ ಆಕಾಶದಲ್ಲಿ ಸೂರ್ಯನಂತೆ ಇರುವ ನ್ಯಾಯಶಾಸ್ತ್ರದಲ್ಲಿ ಸಿಂಹದಂತೆ ಇರುವ, ಕವಿಕುಲದಲ್ಲಿ ಶ್ರೇಷ್ಠರಾದ, ಸಂಗೀತಶಾಸ್ತ್ರದಲ್ಲಿ ನಿಪುಣರಾದ, ವ್ಯಾಕರಣಶಾಸ್ತ್ರದಲ್ಲಿ ಶೇಷನಂತಿರುವ, ಕುತ್ಸಿತ ದೋಷಹೀನರಾದ,

ವೇದವೇದಾಂತಗಳಲ್ಲಿ ನಿಪುಣರಾದ, ಬಹಳ ಕೀರ್ತಿಸಂಪನ್ನರಾದ ಪೂಜ್ಯ ಆಚಾರ್ಯರು ಶ್ರೀಸತ್ಯಧ್ಯಾನತೀರ್ಥರನ್ನು ಕಾಶೀ ವಿದ್ವತ್‌ಸಭೆಯಲ್ಲಿ ನೋಡಿದರು. ಶ್ರೀ ಸತ್ಯಧ್ಯಾನತೀರ್ಥ ರೆಂಬ ಬಿರುಗಾಳಿಯಿಂದ ಅದ್ವೈತವೆಂಬ ಮೋಡವು ನೀರಸವಾಗಿ ಮಾಡಲ್ಪಟ್ಟಿದೆ ಎಂಬ ವಿಚಾರವನ್ನು ತಿಳಿದು ಅಲ್ಲಿಗೆ ಬದರೀಶ ಶುಕ್ಲ ಎಂಬ ಪಂಡಿತನು ಬಂದಿದ್ದನು. ಸತ್ಯಧ್ಯಾನರನ್ನು ವಾದಕ್ಕೆ ಕೆಣಕಿದನು. ವಾದದ ಮಧ್ಯದಲ್ಲಿ ಶ್ರೀಸತ್ಯಧ್ಯಾನರ ಶಿಷ್ಯರಾದ ಆಚಾರ್ಯರು ಶ್ರೀಸತ್ಯಧ್ಯಾನರ ಆಜ್ಞೆಯಿಂದ ವಾದಕ್ಕೆ ಕುಳಿತರು. ಬದರೀಶ ಶುಕ್ಲನನ್ನು ಸಿಂಹವು ಹೇಗೆ ಅರಣ್ಯದ ಮಧ್ಯದಲ್ಲಿ ಆನೆಯನ್ನು ನಿರಾಕರಿಸುತ್ತದೋ ಹಾಗೆ ನಿರಾಕರಿಸಿದರು. ಆಚಾರ್ಯರು ಶ್ರೀಸತ್ಯಧ್ಯಾನತೀರ್ಥರನ್ನು ನಮಸ್ಕರಿಸಿ ಓದಿರುವ ವಿದ್ಯೆಯಿಂದ ಸಂತೋಷ ಪಡಿಸಿದರು. ಹಾಗೆಯೇ ಅಲ್ಲಿ ಬಂದಿರುವ ಅನಂತಕೃಷ್ಣರೆಂಬ ಪಂಡಿತರನ್ನು ವಿದ್ವಜ್ಜನರ ಸಮ್ಮುಖದಲ್ಲಿ ಸೋಲಿಸಿದರು. ಎಲ್ಲ ಕಲೆಗಳಿಂದ ಕೂಡಿರುವ ಕೀರ್ತಿಶಾಲಿಯಾದ ಶ್ರೀ ಆಚಾರ್ಯರು ಕಾಶಿಯಲ್ಲಿ ಜಯಗಳಿಸತಕ್ಕವರಾಗಿ ಮಧ್ವಮತಕ್ಕೆ ಸಂತೋಷ ಕೊಡುತ್ತಾ ಮಂದಹಾಸಭರಿತರಾಗಿ ಕಾಶಿಯಿಂದ ತಮ್ಮ ಊರಿಗೆ ಬಂದರು. ಎಲ್ಲ ವಿದ್ಯೆಗಳಲ್ಲಿ ನಿಪುಣರಾದ ಶ್ರೀ ಸಾತ್ವಿಕಾಚಾರ್ಯರ ಮಕ್ಕಳಾದ ಆಚಾರ್ಯರನ್ನು ಶುದ್ಧಾಂತಃ-ಕರಣಗಳಿಂದ ಪಟ್ಟಣದ ಜನರು ನೋಡಿ ಸಂತೋಷಪಟ್ಟರು. ಶ್ರೀ ಸಾತ್ವಿಕಾಚಾರ್ಯರು ಸಂತೋಷಪಟ್ಟಿದ್ದು ಆಶ್ಚರ್ಯವೇನಲ್ಲ, ಊರಿನಲ್ಲಿ ಶಂಭುಲಿಂಗ ಎಂಬ ಶಾಸ್ತ್ರಿಯನ್ನು ಸೋಲಿಸಿ ಜಯಪತಾಕೆಯನ್ನು ಹಾರಿಸಿದರು. ಶ್ರೀಸತ್ಯಧ್ಯಾನತೀರ್ಥರು ಆಚಾರ್ಯರನ್ನು ನೋಡಿ ನ್ಯಾಯಶಾಸ್ತ್ರದ ಪಾಠಣ, ಪಠಣಗಳಿಂದ ನೀನು ವಿದ್ವಾಂಸನಾಗಿದ್ದರೂ ವೇದಾಂತದ ಉದ್ಗ್ರಂಥಗಳಲ್ಲಿ ನಿನ್ನನ್ನು ಪರೀಕ್ಷಿಸದೇ ವಿದ್ವತ್ ಗೌರವ ನೀಡಲು ಸಾಧ್ಯವಿಲ್ಲ ಎಂದು ನಿರಾಕರಿಸಿದರು. ಆಗ ಆಚಾರ್ಯರು ನಾನು ಎರಡು ತಿಂಗಳ ನಂತರ ಬಂದು ನ್ಯಾಯಾಮೃತ ಪರೀಕ್ಷೆಯನ್ನು ವಿದ್ವತ್ ಸಭೆಯಲ್ಲಿ ಕೊಡುತ್ತೇನೆ ಎಂದು ಹೇಳಿ ಗುರುಗಳ ಪಾದಧೂಳಿಯನ್ನು ನಮಸ್ಕರಿಸಿ ಹೊರಟರು. ಆಚಾರ್ಯರು ಆ ಎರಡು ತಿಂಗಳುಗಳಲ್ಲಿ ನ್ಯಾಯಾಮೃತ ತರಂಗಿಣೀ, ಶ್ರೀನಿವಾಸತೀರ್ಥೀಯ, ಆಮೋದ, ಅದ್ವೈತಸಿದ್ಧಿ, ಲಘುಚಂದ್ರಿಕಾ, ಗುರುಚಂದ್ರಿಕಾ, ಸೌಗಂಧ್ಯ ಗ್ರಂಥಗಳನ್ನು ಹಾಗೂ ಅದಕ್ಕೆ ಸಂಬಂಧ ಪಟ್ಟ ಅನೇಕ ಗ್ರಂಥಗಳನ್ನು ಹಗಲು-ರಾತ್ರಿ ಅಧ್ಯಯನ ಮಾಡಿ ವಿಶ್ವಾಮಿತ್ರಮಹರ್ಷಿಗಳಂತೆ ತಪಸ್ವಿಗಳಾದರು. ಎರಡು ತಿಂಗಳ ನಂತರ ಆಚಾರ್ಯರು ಸುಮಧ್ವನವಮೀ ಮಹೋತ್ಸವದಲ್ಲಿ ಶ್ರೀಸತ್ಯಧ್ಯಾನತೀರ್ಥರನ್ನು ಸಮೀಪಿಸಿ ಗುರುವರ್ಯರನ್ನು ನ್ಯಾಯಾಮೃತ ಪರೀಕ್ಷೆಯನ್ನು ನಡೆಸಲು ಪ್ರಾರ್ಥಿಸಿದರು. ನಂತರ ಶ್ರೀಸತ್ಯಧ್ಯಾನತೀರ್ಥರು ವಾಕ್ಯಾರ್ಥ ಚತುರರಾದ ಧೀರರಾದ ನೂರಾರು ಪಂಡಿತರನ್ನು ಆದೇಶಿಸಿದರು. ಕೆಲವು ಪಂಡಿತರು ಕಠಿಣ ಪ್ರಶ್ನೆಗಳನ್ನು ಮಾಡಿದರು. ಕೆಲವರು ಕುತೂಹಲಪೂರಿತ ಮನಸ್ಸಿನಿಂದ ಪ್ರಶ್ನಿಸಿದರು. ಕೆಲವರು ಮಾತ್ಸರ್ಯದಿಂದ ಪ್ರಶ್ನೆಗೈದರು. ಶಾಂತಮನಸ್ಸಿನಿಂದ ಜಿಜ್ಞಾಸುಗಳು ಪ್ರಶ್ನಿಸಿದರು. ಆಚಾರ್ಯರು ತಮ್ಮ ವಿದ್ಯಾವೈಭವದ ಅತಿಶಯದಿಂದ ಆಗ್ರಹರಹಿತವಿದ್ವಾಂಸರಿಗೆ ಚೇತೋಹಾರಿ ಉತ್ತರವನ್ನು ನೀಡಿದರು. ದುರಾಗ್ರಹಭರಿತರಿಗೆ ಛಲೋತ್ತರಗಳಿಂದ ನಿರಾಕರಿಸಿದರು. ಗುರುಗಳಿಗೆ ಆನಂದವನ್ನು

ನೀಡುತ್ತಾ ಸಂತೋಷಪಡಿಸಿದರು. ನಂತರ ಹಲವು ವಿದ್ವಾಂಸರಾಡಿದ 'ನೀನು ಸರ್ವಜ್ಞನಿದ್ದೀಯಾ ಹೋಗು' ಎಂಬ ವ್ಯಂಗ್ಯಮಾತು ಶ್ರೀಸತ್ಯಧ್ಯಾನರಿಗೆ ಮುದ ನೀಡಿತು. ನಂತರ ಅವರಿಗೆ ಶ್ರೇಷ್ಠ ವಿದ್ವಾಂಸರ ಸಂಭಾವನೆಯನ್ನು ನೀಡಿ ತೃಪ್ತಿಪಡಿಸಿದರು. ಆಗಲೇ ಆಚಾರ್ಯರಿಗೆ ಪ್ರತಿಶ್ಲೋಕ ಸುಧಾ ಹಾಗೂ ಅನುವ್ಯಾಖ್ಯಾನ ಶಾಂತಿಪಾಠ ಹೇಳಿದರು. ಮತ್ತು ದ್ವೈತದ್ಯುಮಣಿಯ ಪಾಠವನ್ನು ಹೇಳಿದರು. ಪೂಜ್ಯ ಆಚಾರ್ಯರ ಲೌಕಿಕ,ವೈದಿಕಶಿಷ್ಯರು ನೂರಾರು. ಅವರ ಪಾಠದ ಪದ್ಧತಿ ಕೋಟಿಕ್ರಮಗಳ ವಿಚಾರಧಾರಾ ಅಲೌಕಿಕವಾದದ್ದು. ಆಚಾರ್ಯರ ಜೀವನ ಚರಿತ್ರೆಯನ್ನು ಸುಂದರವಾಗಿ ಬಂಧುರವಾಗಿ ಹೃದಯಂಗಮವಾಗಿ ''ಆಚಾರ್ಯಶತಕತ್ರಯಂ'' ಹಾಗೂ ''ಆಚಾರ್ಯವಿಜಯ'' ಎಂಬ ಕಾವ್ಯಗಳಿಂದ ತಿಳಿದುಕೊಳ್ಳಬಹುದು.

ಪೂಜ್ಯ ಆಚಾರ್ಯರು ಐವತ್ತಕ್ಕೂ ಮಿಗಿಲಾದ ಕೃತಿಗಳನ್ನು ರಚಿಸಿದ್ದಾರೆ.

1. ಶ್ರೀಮನ್ನ್ಯಾಯಾಮೃತಾರ್ಣವಃ
2. ಶ್ರೀ ನ್ಯಾಯಸುಧಾಕಂಟಕೋದ್ಧಾರಃ
3. ಶ್ರೀನ್ಯಾಯಸುಧಾಕಂಟಕೋದ್ಧಾರಃ (ಭಾಗ-2)
4. ಶ್ರೀನ್ಯಾಯಸುಧಾಮಂಡನಕಂಟಕೋದ್ಧಾರಃ
5. ಅಭಿನವಶರದಾಗಮಃ
6. ವಿಜಯೀಂದ್ರವಿಜಯವೈಜಯಂತೀ
7. ವಿದ್ಯಾವಿವೇಕಃ
8. ಸಿದ್ಧಾಂತಭೂಷಣಮ್
9. ಸಂಕ್ಷಿಪ್ತಶ್ರೀಸೂಕ್ತವಿವರಣಮ್
10. ಶ್ರೀವೈಶೇಷಿಕನ್ಯಾಯಸುಧಾಕೂತಮ್
11. ಕಕ್ಷ್ಯಾರ್ಥಸಂಗ್ರಹಃ
12. ಸೂತ್ರಾರ್ಥಸಂಗ್ರಹಃ
13. ವೇದಾಪೌರುಷೇಯತ್ವವಾದಃ
14. ಗುಣಪೂರ್ಣತ್ವವಾದಃ
15. ನಿರ್ದೋಷತ್ವವಾದಃ
16. ಬಂಧಮಿಥ್ಯಾತ್ವವಾದನಿರಾಸಃ
17. ತತ್ವವಿಚಾರಃ
18. ಶ್ರೀಗುರುವೈಭವಮಹಾಕಾವ್ಯಮ್
19. ಶ್ರೀತೀರ್ಥಕ್ಷೇತ್ರವಿಲಾಸಃ
20. ಅಣುಗುರುವೈಭವಕಾವ್ಯಮ್ ।

21. ತಾರತಮ್ಯಮಂಗಳಾಷ್ಟಕಮ್
22. ಶ್ರೀನಿವಾಸಕಲ್ಯಾಣಾಷ್ಟಕಮ್
23. ವಿಶ್ವಂಭರಸ್ತುತಿಃ
25. ಹಯಗ್ರೀವಹಸ್ತಾವಲಂಬನಸ್ತೋತ್ರಮ್
26. ವಿಷ್ಣುಲಹರೀ
27. ಹಯಗ್ರೀವಭುಜಂಗಪ್ರಯಾತಮ್
28. ಹಯಗ್ರೀವಕರಾವಲಂಬನಸ್ತೋತ್ರಮ್
29. ಅಲಂಕಾರಸಂಗ್ರಹಃ
30. ವಿಷ್ಣುಸಹಸ್ರಮ್
31. ವಿಪ್ರಸಂದೇಶಃ
32. ತತ್ವಸಂಖ್ಯಾನಟೀಕಾವಿವರಣಮ್
33. ಈಶಾವಾಸ್ಯೋಪನಿಷದ್ವ್ಯಾಖ್ಯಾನಮ್ (ಅಮುದ್ರಿತ)
34. ನ್ಯಾಯಸುಧಾಸಹಸ್ರಧಾರಾ (ಅಮುದ್ರಿತ)

ಇತ್ಯಾದಿ..

ಸಂದಾಪುರ ವ್ಯಾಸರಾಜಪೀಠಾಧೀಶ್ವರರಾದ ಶ್ರೀ 1008 ಲಕ್ಷ್ಮೀಶತೀರ್ಥರಿಗೆ ಪಾಠ ಹೇಳಿ ಅವರಿಂದ ಅನೇಕ ಅನುವಾದಗಳನ್ನು ಮಾಡಿಸಿ, ದಿಗ್ದೇಶಗಳಲ್ಲಿ ಸಂಚರಿಸಿ, ಕೊಚ್ಚಿರಾಜನೇ ಮೊದಲಾದವರನ್ನು ಜಯಿಸಿ, ಮಧ್ವಪತಾಕೆಯನ್ನು ಹಾರಿಸಿದ ಕೀರ್ತಿಯು ಪೂಜ್ಯ ಆಚಾರ್ಯರದು.

ಈ ಕಾವ್ಯಕ್ಕೆ ಅಪರೂಪವಾದ ಸಂಸ್ಕೃತವ್ಯಾಖ್ಯಾನವನ್ನು ಪಂ. ರುಚಿರಾಚಾರ್ಯರು ರುಚಿಕಟ್ಟಾದ ವಾಕ್ಯಗಳಿಂದ ಬರೆದಿದ್ದಾರೆ. ಆಂಗ್ಲಭಾಷೆಯಲ್ಲಿ ಪಂ. ಗೋಪಾಲಕೃಷ್ಣಾಚಾರ್ಯರು ಬರೆದಿದ್ದಾರೆ. ಮತ್ತು ಕನ್ನಡದ ಕನ್ನಡಿಯಲ್ಲಿ ಗದ್ಯ-ಪದ್ಯರೂಪವಾದ ಅನುವಾದವನ್ನು ರುಚಿರಾಚಾರ್ಯರು ಹೃದಯಸ್ಪರ್ಶಿಯಾಗಿ ಬರೆದಿದ್ದಾರೆ. ಪೂಜ್ಯ ಆಚಾರ್ಯರ ಪುಣ್ಯಸ್ಮರಣೆಯ ಈ ರಜತಮಹೋತ್ಸವದ ಸಂದರ್ಭದಲ್ಲಿ ಬಿಡುಗಡೆಯಾದ ಈ ಅಪೂರ್ವಕೃತಿಯು ಕಾವ್ಯಲೋಕದಲ್ಲಿ ಅತ್ಯುತ್ಕೃಷ್ಟಫಲ ಎಂದು ಭಾವಿಸುತ್ತಾ ವಿಸ್ತಾರವಾದ ನನ್ನ ಲೇಖನದಿಂದ ವಿರಮಿಸುತ್ತೇನೆ.

26-11-2005
ಪಾರ್ಥಿವ ಕಾರ್ತಿಕ ಕೃಷ್ಣ ದಶಮೀ

**ಜಾಲೀಹಾಳ ಸುಕೇಶಾಚಾರ್ಯಃ**
ಆಚಾರ್ಯವಿದ್ಯಾಮಂದಿರಮ್
ಧಾರವಾಡ.

॥ ಶ್ರೀ ಗುರುರಾಜೋ ವಿಜಯತೇ ॥

# ಕನ್ನಡ ವಿಪ್ರಸಂದೇಶ ಪರಿಚಯ

ಭಾರತೀಯ ಸಕಲ ಭಾಷೆಗಳ ಮಧ್ಯದಲ್ಲಿ ಅಮರಭಾರತಿ ಎನಿಸಿದ ಸಂಸ್ಕೃತಕ್ಕೆ ಕನ್ನಡಿಯಂತೆ ಮನ್ನಣೆ ಪಡೆದ ಸುಂದರ ಭಾಷೆ ನಮ್ಮ ಕನ್ನಡಭಾಷೆ. ಶಾಸ್ತ್ರಾರ್ಥ ಚಿಂತನ ಮಂಥನದಿಂದ ಆರಂಭಿಸಿ ಲಾಲಿ ಜೋಗುಳದ ಹಾಡಿನವರೆಗೆ ತನ್ನ ವ್ಯಾಪ್ತಿ ವಿಸ್ತರಿಸಿರುವ ಈ ದಿವ್ಯ ಭಾಷೆಯಲ್ಲಿ ಭವ್ಯವಾದ ಕಾವ್ಯಶ್ರೇಣಿಯೇ ಹರಿಯುತ್ತ ಬಂದಿದೆ. ಅವುಗಳಲ್ಲಿ ಸೈದ್ಧಾಂತಿಕ ಪ್ರಮೇಯಗಳ ಆವಿಷ್ಕಾರದ ಗುರಿಯಲ್ಲಿ ಬಂದ ಹರಿದಾಸ ಸಾಹಿತ್ಯವು ಮೌಲಿಕವಾದ ಕಾವ್ಯಶ್ರೇಣಿಗೆ ಒಪ್ಪುವುದರಲ್ಲಿ ಎರಡನೇ ಮಾತಿರುವುದಿಲ್ಲ. ಆದರೆ ಕೇವಲ ಪ್ರಕೃತ ನರ-ನಾರೀ ವಿಹಾರ ವರ್ಣನೆಗೆ ಮನಸೋತ ಅಜ್ಞ ಸಮಾಜಕ್ಕೆ ಇದು ಅರ್ಥವಾಗದಿರುವುದು ದಿಟವೆ. ಹಾಗಾಗಿ, ಮಾಧ್ವರಲ್ಲಿ ಕನ್ನಡದ ಸಾಹಿತ್ಯಸಂಪದಕ್ಕೆ ಹಿರಿದಾದ ಕೊಡುಗೆ ಏನೂ ಇಲ್ಲವೆಂಬ ಹಗುರ ಮಾತು ಕೇಳಿ ಬರುತ್ತದೆ. ಆದರೀಗ ಅದಕ್ಕೂ ಅವಕಾಶವಾಗದಂತೆ ಮೈತಾಳಿ ಬಂದ, ಸುಂದರ ಛಂದೋಬದ್ಧವಾದ, ಬಂಧುರ ಕವಿತೆಯಾದ 'ಕನ್ನಡ ವಿಪ್ರಸಂದೇಶ'ವು ಸಿಕ್ಕಮೇಲೆ ಮಾಧ್ವ ಜನಾಂಗಕ್ಕೆ ಸೊಕ್ಕು ಬಂದರೂ ಅಚ್ಚರಿಯೇನಲ್ಲ!

ಹೆಸರೇ ತಿಳಿಸುವಂತೆ, 'ಕನ್ನಡ ವಿಪ್ರಸಂದೇಶ'ವು ಸಂಸ್ಕೃತ ವಿಪ್ರಸಂದೇಶದ ಪ್ರತಿಬಿಂಬ. ಮೂಲ ವಿಪ್ರಸಂದೇಶವು, ಈ ಶತಮಾನದ ಉನ್ನತ ಕವಿಗಳೂ ತಾರ್ಕಿಕರೂ ಮೇಧಾವಿಗಳೂ ಸಕಲ ವಿದ್ಯಾಪಾರಂಗತರೆಂದೇ ಮಾನ್ಯರೂ ಆದ ಪಂಡಿತ ರಾಜ ಜಾಲಿಹಾಳ ಶ್ರೀನಿವಾಸಾಚಾರ್ಯರ ಅಮರಕೃತಿ. ಕಾಳಿದಾಸನ 'ಮೇಘದೂತ'ಕ್ಕೆ ಹಲವೆಡೆ ಪ್ರತಿಸ್ಪರ್ಧಾತ್ಮಕವೂ ಆದ ಈ ಕಾವ್ಯವು ಪ್ರಕಾಶನವಾಗುವ ಜೊತೆಗೆ ಕನ್ನಡದ ವಿಪ್ರಸಂದೇಶವೂ ಪ್ರಕಾಶಿತವಾಗುತ್ತಿರುವುದು ರಸಿಕ ಸಮಾಜದ ಭಾಗ್ಯೋದಯವೆಂದೇ ಹೇಳಬೇಕಾಗಿದೆ. ಸಂಸ್ಕೃತವನ್ನೂ ಅರಿಯದ ಸಹೃದಯರಿಗೆ ಮೂಲದ ಆನಂದವನ್ನೂ ಕಿಂಚಿತ್ತಾದರೂ ಮುಟ್ಟಿಸಲು ಈ ರೀತಿಯ ಪದ್ಯಾನುವಾದದ ಅವಶ್ಯಕತೆ ಸುಳ್ಳಲ್ಲ. ಆದ್ದರಿಂದಲೇ ಮೇಘದೂತಕ್ಕೆ ಬೇಂದ್ರೆಯವರು ಸುಂದರ ಭಾವಗ್ರಹಣವಾಗಿ ಕನ್ನಡ ಮೇಘದೂತ ರಚಿಸಿರುವುದು ಗೋಚರಿಸುತ್ತದೆ. ಅದರಂತೆ ಇಲ್ಲಿ ಕನ್ನಡ ವಿಪ್ರಸಂದೇಶ ಮೈತಾಳಿ ಬಂದಿರುತ್ತದೆ.

**ಬಿಂಬ - ಪ್ರತಿಬಿಂಬ**

ಮೂಲವೇ ಎದುರಿಗಿದ್ದಾಗ ಈ ಅನುವಾದದ ಅವಶ್ಯಕತೆ ಏನು? ಎಂದು ಪ್ರಶ್ನೆ ಇಲ್ಲಿ ಸಹಜ. ಆದರೂ ತಮ್ಮ ಭಾವಚಿತ್ರವನ್ನು ತಾವೇ ತೆಗೆಸಿ ಆನಂದಿಸಿ ನೋಡಬಯಸುವ ರೀತಿಯಂತೆ, ಬಿಂಬದ ಜೊತೆಯಲ್ಲಿ ಪ್ರತಿಬಿಂಬವನ್ನೂ ನೋಡುವುದರಲ್ಲಿ ಹೊಸ ಸುಖವಿರುವುದು ಸತ್ಯ ಸಂಗತಿ. ಇದಲ್ಲದೆ, ಯಾವುದೇ ಸೃಜನಶೀಲ ಬರಹಗಾರ ತನ್ನ ಕೃತಿಯಲ್ಲಿ ತನ್ನದೇ ಕೆಲವು ಹೊಸ ಹೊಳಪನ್ನು ತುಂಬಿರುತ್ತಾನೆ. ಪ್ರಯೋಗಶೀಲನಾಗಿರುತ್ತಾನೆ. ಇದು ಬೇಂದ್ರೆಯವರ ಕನ್ನಡ ಮೇಘದೂತವನ್ನು ಕಂಡಾಗ ಅರ್ಥವಾಗುವ ಸಂಗತಿ. ಪೀಠಿಕೆಯ ಸೊಗಸು ಹಾಗಾಗಿಯೇ ಬೇಂದ್ರೆಯವರು ಮೇಘದೂತವನ್ನು ಕನ್ನಡೀಕರಿಸುವಾಗ, ತಮ್ಮದೇ ಆದ ಶೃಂಗಾರ-ಕಾಮಗಳ ವಿಶ್ಲೇಷಣಾತ್ಮಕವಾದ ಪೀಠಿಕೆಯೊಂದನ್ನು ರಚಿಸಿರುವುದು ಹೃದ್ಯ ವೇದ್ಯವಾಗಿರುತ್ತದೆ. ಆದರೆ ಪ್ರತಿಯೊಬ್ಬ ಜೀವಿಯೂ ತನ್ನದೇ ಆದ ಕೆಲವು ಮತೀಯ ಶ್ರದ್ಧೆಗೆ ತುತ್ತಾಗಿ ವರ್ತಿಸುವ ಸಂಗತಿ

ಬೇಂದ್ರೆಯವರ ಪೀಠಿಕೆಯಲ್ಲೂ ಕಂಡಾಗ, 'ಯೋ ಯಚ್ಛ್ರದ್ಧಃ' ಎಂಬ ಕೃಷ್ಣನ ಗೀತೋಕ್ತಿಯು ನೆನಪಾಗುತ್ತದೆ. ಕಾಮದ ಬಗ್ಗೆ ಬೇಂದ್ರೆಯವರು ನೀಡಿದ ವಿಶ್ಲೇಷಣೆ ಹಾಗೂ 'ಮೇಘ' 'ಯಕ್ಷ' 'ಯಕ್ಷಿ' 'ಕವಿ' 'ಕಾವ್ಯ'ಗಳ ಬಗ್ಗೆ ಮಾಡಿರುವ ನಿರೂಪಣೆ, ಗಮನಾರ್ಹವೂ ಹಲವೆಡೆ ಆಕ್ಷೇಪಾರ್ಹವೂ ಆಗಿರುವುದೆಂದು ವಿಪ್ರಸಂದೇಶದ ಪೀಠಿಕೆಯನ್ನು ನೋಡಿದಾಗ ಸ್ಪಷ್ಟವಾಗದೆ ಇರದು. ಮೂಲ ಮೇಘದೂತಕ್ಕೆ ವಿಮರ್ಶಾತ್ಮಕವೂ ಆಗಿ ವಿಪ್ರಸಂದೇಶ ಹೊರಬಂದಂತೆ, ಕನ್ನಡ ಮೇಘದೂತಕ್ಕೆ ಕನ್ನಡದ ವಿಪ್ರಸಂದೇಶ ಆವಿಷ್ಕಾರಗೊಂಡಿದೆಯೆಂದರೆ ತಪ್ಪಾಗಲಾರದು.

**'ಕಾಮ' ಜಿಜ್ಞಾಸೆ**

ಶೃಂಗಾರ ಕಾವ್ಯದ ಅನುವಾದಕ್ಕೆ ಹಿನ್ನೆಲೆಯಾಗಿ ಈ ವಿಚಾರ ಇಲ್ಲಿ ಪ್ರಸ್ತುತವೆಂಬುದು ಎಲ್ಲರಿಗೂ ಅರ್ಥವಾಗುವ ಸಂಗತಿ. ಇಲ್ಲಿ ಬೇಂದ್ರೆಯವರು ಅನಾದಿಕಾಮವನ್ನು, 'ಬ್ರಹ್ಮ-ಹೃದಯದಲಿ ಜನಿಸಿದ ಇಚ್ಛೆ' ಎಂದು ಗುರುತಿಸಿದ್ದಾರೆ. ಆದರೆ ಅನಾದಿ ಕಾಮದ ನಿರೂಪಣೆಯಲ್ಲಿ ಜನಿಸಿದ ಇಚ್ಛೆಯೆಂದು ಹೇಳಿದ್ದು ಹೃದ್ಯವಾಗಿ ಗೋಚರಿಸುತ್ತಿಲ್ಲವೆಂದು ತಿಳಿಸುವಂತೆ, ಪ್ರಕೃತ ಕನ್ನಡ ವಿಪ್ರಸಂದೇಶಕಾರರು 'ತೆರೆದುಕೊಂಡ ಇಚ್ಛೆ' ಎಂದು ಬಣ್ಣಿಸಿದ್ದು ಗಮನಿಸಬೇಕಾದ ಸಂಗತಿಯು. ಇದಲ್ಲದೆ, ಆ 'ಬೊಮ್ಮ' ಯಾರು? ಎಂಬುದನ್ನು ಜೀವ-ಬ್ರಹ್ಮತಾದಾತ್ಮ್ಯವಾದದ ವಾಸನೆಯುಂಡ ಬೇಂದ್ರೆಯವರ ಪೀಠಿಕೆ ಮೂಕವಾಗಿ ಉತ್ತರಿಸಿದರೆ, ದಾಸ-ಈಶಭಾವದ ವೈದಿಕ ತತ್ವಜ್ಞಾನದ ಸಂಸ್ಕಾರದಲ್ಲಿ ಈ ಪೀಠಿಕೆ 'ಪರಬೊಮ್ಮ' ಎಂದು ನಿರೂಪಿಸಲಾಗಿದೆ. ಪರಬ್ರಹ್ಮ ನಾರಾಯಣನ ಇಚ್ಛೆಯೇ ಜಗತ್ತೆಲ್ಲವನ್ನೂ ನಿಯಂತ್ರಿಸುವ ಕಾಮವೆಂಬುದು ''ಸೋಽಕಾಮಯತ'' ಇತ್ಯಾದಿ ಶ್ರುತಿಯ ಮರ್ಮವಷ್ಟೆ. ಈ ಕಾಮ ವಿಕಾಸವೇ ಜಗದ ವಿಕಾಸ ಎಂಬುದನ್ನೇ ಇಲ್ಲಿ ಕವಿಯು ಹೃದ್ಯವಾಗಿ ನಿರೂಪಿಸುತ್ತಿರುವರೆಂದು ಗುರುತಿಸಬಹುದು. ಈ ಕಾಮ ವಿಕಾಸಕ್ಕೂ ಹಿನ್ನೆಲೆಯೇನೆಂದು ಬಗೆದಾಗ ಬಂದ ವೇದದ ಸಂದೇಶವೇ 'ಸುಖೋದ್ರೇಕ'. 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್'' ಎಂದು ವೇದಗಳು ತಿಳಿಸಿದ್ದನ್ನೇ ''ಸುಖವು ಉಕ್ಕಿ ಪರ ಬೊಮ್ಮಹೃದಯದಲಿ ತೆರೆದುಕೊಂಡ ಇಚ್ಛೆ'' ಎಂಬುದಾಗಿ ನುಡಿದಿರುವುದು ಮನನೀಯವಾಗಿದೆ. ಹೀಗೆ ಬೇಂದ್ರೆಯವರ ಪೀಠಿಕೆಗೆ ಇಲ್ಲಿಯ ಪೀಠಿಕೆ ನೈಜ ಸವಾಲೊಡ್ಡುವ ಸಂಗತಿಯಾಗಿ ಆರಂಭಗೊಂಡಿರುತ್ತದೆ.

ಈ ಪೀಠಿಕೆಯ ಪೂರ್ಣ ವಿಶ್ಲೇಷಣಕ್ಕೆ ತೊಡಗಿದರೆ ನೂರಾರು ಪುಟಗಳೇ ಬೇಕಾಗ-ಬಹುದು! ಇಲ್ಲಿರುವ ಪದ ಪದದ ಹಿನ್ನಲೆಯಲ್ಲಿ ಹತ್ತಾರು ಆಕೂತಗಳು, ಹಲವಾರು ವಿಮರ್ಶೆಗಳು, ಸಾಕಷ್ಟು ಶ್ರುತಿ ಸೂತ್ರ ಸಂದೇಶಗಳು ಅಡಗಿರುತ್ತವೆ. ಸೂಕ್ಷ್ಮವಾಗಿ ಕೆಲವನ್ನು ಮಾತ್ರ ವಾಚಕರ ಅವಗಾಹನೆಗೆ ಪರಿಚಯಿಸುವುದಷ್ಟೆ ನನ್ನ ಲೇಖನದ ಉದ್ದೇಶವು. ನಾರಾಯಣನ 'ಕಾಮ'ವನ್ನು ನಿರೂಪಿಸುವುದರ ಜೊತೆಗೆ ಇಲ್ಲಿ ಲಕ್ಷ್ಮೀಕಾಮವನ್ನು ''ಹಣವ ಎಣಿಸಿ ಮತ್ತೆಣಿಸುವಾಗ ಉತ್ಸಾಹ ಕುಗ್ಗದಂತೆ ಹರಿಯ ಗುಣದ ಗಣ ಎಣಿಸುವಾಸೆ ಸಿರಿದೇವಿ ಕಾಮವಂತೆ'' ಎಂದು ಹೇಳಿದ್ದು ''ಬಗೆ ಬಗೆಯ ನೂತನವ ಕಾಣುತ'' ಎಂಬ ಹರಿಕಥಾಮೃತಸಾರದ ಮಾತಿನ ಅಮೃತ ರಸವನ್ನು ಸುವರ್ಣ ಬಟ್ಟಲಲ್ಲಿ ತುಂಬಿಟ್ಟಂತಿದೆ. ಜಗದ ತಂದೆ – ತಾಯಿಗಳಾದ ಹರಿ-ಸಿರಿದೇವಿ

ಯರ ಕಾಮಸೆಲೆಯಲ್ಲಿ ಜಗದ ಕಾಮಲೀಲೆಯ ಉಗಮವೆಂಬ ಮಾತು ಷಟ್ಪ್ರಶ್ನೆ ಉಪನಿಷತ್ತಿನ ಹಿನ್ನೆಲೆಯದೆಂದು ಊಹಿಸಬಹುದು. ಕಾಮದಲ್ಲಿ ತಾರತಮ್ಯ ಫಲತಾರತಮ್ಯಕ್ಕೆ ಆವಶ್ಯಕವಾದ ವಿಚಾರವೆಂದು ಅದರ ನಿರೂಪಣೆಯಿರುತ್ತದೆ. ಮತ್ತೆ 'ಕಾಮ' ಎಂಬುದು ಜೀವದ ಒಂದು ಅವಿಭಾಜ್ಯ ಅಂಗವೆಂದು ನಿರೂಪಿಸುತ್ತ ''ಕಾಮ ಚೇತನರ ಮೂಲ'' ಎಂಬ ಪದ್ಯದಲ್ಲಿ ವಿಶ್ಲೇಷಿಸಿದ ವಿಚಾರ ಮುಕುತಿಯಲ್ಲೂ ಕಾಮದ ಅಸ್ತಿತ್ವವನ್ನೂ ಸಾರುತ್ತಿದೆ. ಕಾಮವು ಜಗದಲ್ಲಿ ನಾನಾರೂಪ-ವಾಗಿ ವ್ಯಾಪಿಸಿರುವುದನ್ನು ಕಾಮಕ್ಕೆ ರತಿಯು ಜೊತೆಯಾಗುವ ರೀತಿಯನ್ನು ಹೃದ್ಯವಾಗಿ ಬಣ್ಣಿಸ-ಲಾಗಿದೆ. ಈ ಕಾಮ-ರತಿ ದಂಪತಿಯ ಕೂಸು ತೃಪ್ತಿಯೆಂದು ಹೇಳಿದ್ದು ಸೊಗಸಾಗಿದೆ.

ಇತಿಹಾಸದಲ್ಲಿ ಕಾಮನ ಪಾತ್ರ ಅನೇಕ ಕಡೆ ಬಂದಿದೆ. ಅದರಲ್ಲಿ ಮುಕ್ಕಣ್ಣನಿಂದಾದ ಕಾಮ ದಹನದ ಕಥೆ ಸುವಿದಿತವಷ್ಟೆ. ಇದರ ಬಗ್ಗೆ ಬೇಂದ್ರೆಯವರು ವಿಪ್ರಲಂಭ ಶೃಂಗಾರದ ಹಿನ್ನೆಲೆಯಲ್ಲಿ ನೀಡಿದ ವಿಶ್ಲೇಷಣೆಗೆ ಇಲ್ಲಿಯ ಪೀಠಿಕೆಯಲ್ಲಿ ಚುರುಕಾದ ವಿಮರ್ಶೆ ರಸವತ್ತಾಗಿ ಮೂಡಿದೆ.

**ರತಿಯನಗಲಿಸಿದರೊ ಅಯ್ಯೋ ಪಾಪಿಗಳು ಕಾಮನನ್ನು ರಮಿಸಿ**
**ಶಿವನ ನೇತ್ರಕಾಹುತಿಯ ಕೊಟ್ಟರೊ.......**

ಹೀಗೆ ಬೇಂದ್ರೆಯವರು ಕಾಮದಹನ ರತಿಕಣ್ಣೀರು ತರಿಸಿದ ಪರಿಯನ್ನು ಬಣ್ಣಿಸಿದ್ದಾರೆ. ಆದರೆ ಇದು ಲೋಕ ಕಲ್ಯಾಣಕ್ಕಾದ ಕಾಮದಹನವನ್ನು ಪಾಪಿಗಳ ಕಾರ್ಯ ಸಾಧನೆಯಂತೆ ಚಿತ್ರಿತವಾಗಿರುವುದು ಅಸ್ವರಸವಷ್ಟೆ ಆದ್ದರಿಂದ ಇದೇ ಸಂಗತಿಯನ್ನು ಇಲ್ಲಿ,

**ಇಹದ ಪರದ ಕ-ಣ್ಣಲ್ಲಿ ಬೆಳೆದ ಕಾ-ಮನ್ನ ಮೋಕ್ಷವೆಂಬ**
**ಕಣ್ಣಾಹುತಿಯ ಕೊಟ್ಟು ವಿಷಯರತಿ-ಯನ್ನು ಅಳಿಸಿ ತುಂಬ ||**
**ಮನಸು ಬುದ್ಧಿಗಳ ಮಿಲನದಿಂದ ಶು-ದ್ಧಾಗ್ನಿ ಅಗ್ನಿಯಿಂದ**
**ಬಂದ ಪುಣ್ಯಸೇ-ನಾನಿಯಿಂದ ತಾ-ಮಸರ ದಾಹ ಛಂದ**

ಎಂಬ ಪದ್ಯದಲ್ಲಿ, ಐಹಿಕ ಲೋಲುಪತೆಯ ಕಾಮವನ್ನು, ಮುಕ್ಕಣ್ಣೆಂಬ ಮುಕುತಿಯ ದೃಷ್ಟಿಗಿಟ್ಟು ದಹನ ಮಾಡಿದ್ದಾಗಿ ವಿವರಿಸಿ, ವಿಷಯ ರತಿಯನ್ನು ಅಳುವಂತೆ ಮಾಡಿದ್ದೆಂದು ನಿರೂಪಿಸಿದ್ದು ಯಾವ ಸಹೃದಯರಿಗೆ ಆಹ್ಲಾದತರದು? ಇದಲ್ಲದೆ ಐಹಿಕಕಾಮದಹನದ ನಂತರ, ಶಿವ-ಪಾರ್ವತಿಮಿಲನದ ಸಂಕೇತವಾಗಿ ಮನಸ್ಸು-ಬುದ್ಧಿಗಳ ಮಿಲನವೆಂದು, ಆಗ ಶಿವನಿಂದಲೇ ಜನಿಸಿಬಂದ ಆ ಕಾಮನೇ ಸ್ಕಂದನೆಂದು, ಅವನು ಅಗ್ನಿಯಿಂದ ಬಂದು 'ಅಗ್ನಿಭೂ' ಎಂದೆನಿಸಿದವನಾಗಿ ಶುದ್ಧನಾಗಿರುವನೆಂದು, ಆದ್ದರಿಂದಲೇ ದುಷ್ಟವಿಷಯಗಳ ಸಂಕೇತವಾದ ತಾರಕನ ಸಂಹಾರವೆಂದು, ಕಾಮದಹನ ಜೀವನದ ಅವಿಭಾಜ್ಯ ಅಂಗವೆಂಬುದಾಗಿ ಇಲ್ಲಿ ಉತ್ಕೃಷ್ಟವಾದ ವಿಶ್ಲೇಷಣೆ ಕಾಣಸುತ್ತಿದೆ.

ಬೇಂದ್ರೆಯವರು ''ಅಳಬೇಕು ಪಾಪ ರತಿಯು'' ಎಂದು ರತಿಯ ಬಗ್ಗೆ ಅನುಕಂಪ ತೋರಿಸಿದ್ದಕ್ಕೆ, ಇಲ್ಲಿ ಕವಿಗಳು ತೀಕ್ಷ್ಣವಾಗಿ ಪ್ರತಿಕ್ರಯಿಸುವಂತೆ ತೋರುತ್ತಿದೆ.

''ರತಿಯ ಅಳಿಸಿದರೆಂದು ಅತ್ತರೆ, ಸತಿಯ ಗತಿಯು ಏನು?'' ಈ ಮಾತು ಬಹಳ ಮಾರ್ಮಿಕವಾಗಿದೆ. ರತಿಯು ಅಳುವುದಕ್ಕಿಂತ ಬೇಂದ್ರೆಯವರೇ ಬಹಳ ಅಳುತ್ತಿರಬೇಕೆಂಬ ಭಾವವು

'ಅತ್ತರೆ' ಎಂಬುದರಿಂದ ಧ್ವನಿತವಾಗಿದೆ. ಸತಿ-ರತಿಯಲ್ಲಿ ಮೊದಲು ಶಿವನಿಂದ ಅಗಲಿ ಬೆಂಕಿಗೆ ಆಹುತಿಯಾದ ಸತಿಗಾಗಿ ಅಳುವರಾರೆಂಬಂತೆ ಈ ಕವಿಗಳು ತಮ್ಮ ವಿಚಾರವಿಟ್ಟಂತಿದೆ. ವಸ್ತುತಃ ಇಲ್ಲಿ ಯಾರೂ ಅಳಬೇಕಾಗಿಲ್ಲ. ಕಾರಣ, ಲಲನೆಗೆ ದಿಗಂಬರನಾಗಿ ವಲ್ಲಭನ ಮಿಲನವು ಅಳು ತರುವ ಸಂಗತಿಯಲ್ಲವೆಂಬುದಾಗಿ,ಆ ದಿಗಂಬರ – ಅನಂಗನೇ ರತಿಗೆ ಇಷ್ಟ ತಾನೆ ಇನ್ನೂ ಎಂದು ಕಾಮ-ದಹನವು ಕಾಮನನ್ನು ದಿಗಂಬರಗೊಳಿಸಿತೆಂದು ಶ್ಲೇಷಾಲಂಕಾರದೊಡನೆ ಮಾಡಿರುವ ವರ್ಣನೆ ರಸಿಕ ಸಮಾಜಕ್ಕೆ ಸುಖ ಉಕ್ಕಿಸುವುದರಲ್ಲಿ ಅನುಮಾನವೇ ಇಲ್ಲ.

ಕಾಮನು ಶಿವನಿಗೆ ಸ್ಕಂದನಾಗಿ ಕೃಷ್ಣನಿಗೆ ಪ್ರದ್ಯುಮ್ನನಾಗಿ ಮಗನೆನಿಸಿದ್ದಾನೆ. ರಾಮನಿಗೆ ಭರತನಾಗಿ ಅನುಜನಾಗಿದ್ದಾನೆ. ವಿರಕ್ತ ಶಿವಪುತ್ರನೇ ಬ್ರಹ್ಮಚಾರಿಯೆಂದು, ಶೃಂಗಾರಿ ಶ್ರೀಕೃಷ್ಣಸುತನೇ ಗೃಹಸ್ಥನೆಂದು, ವನವಾಸಿ ರಾಮನ ಸಹೋದರನಾಗಿ ನಂದಿಗ್ರಾಮದಿ ವಾನಪ್ರಸ್ಥನೆಂದು, ತಲವಕಾರ ಉಪನಿಷತ್ ಕಥೆಯಂತೆ 'ಯಕ್ಷ' ರೂಪಿ ಭಗವಂತನ ಅರಿವಿಗಾಗಿ ಮುಂದಾಳಾಗಿ ದೇಹಿ ಎಂದು ಪ್ರಚೋದಿಸಿದ ಈ ಕಾಮದೇವ, ಯತಿಸಾರ್ವಭೌಮನೆಂದು (ಕಾಮನೇ ಸನತ್ಕುಮಾರನೂ ಅಹುದು) ವರ್ಣಿಸುವುದು ವಿವೇಕಯುತವಾದ ವಿಶ್ಲೇಷಣೆಯು. ಈ ಕಾಮಜಿಜ್ಞಾಸೆಯಲ್ಲಿ 'ಧರ್ಮ ಅರ್ಥಗಳು ಸೇರಿದಾಗ ಆ ಕಾಮ ಸಕಲ ಪರಮ' ಎಂಬ ಮಾತು, ಮಹಾಭಾರತದಲ್ಲಿ ಬರುವ ಕಾಮದ ಬಗ್ಗೆ ಶ್ರೀ ಭೀಮಸೇನ ದೇವರಾಡುವ ನಿರ್ಣಯದ ಸಾರ ಸಂಗ್ರಹ.

**ಜೀವಲೋಕ ಕಾಮ :**

ಈ ವಿಷಯದಲ್ಲಿ ಸತಿಪತಿಯರು ಒಂದಾಗುವುದನ್ನು ''ಭಿನ್ನದೇಹದಲಿ ಏಕಜೀವ ಕಾಣುವರು'' ಎಂದು ಅದ್ವೈತ ಮತೀಯ ಭಾವಪೂರ್ಣವಾಗಿ ಬೇಂದ್ರೆಯವರ ವಿಚಾರವಿದ್ದರೆ, ಅದಕ್ಕೆ ದ್ವೈತಮತದ ಉತ್ತರವಾಗಿ ಮುಂದಿನ ಉಪಸಂಹಾರ ಪ್ರಾಬಲ್ಯದಿಂದ, ಸತಿಪತಿಯರ ಫಲವಾದ ''ಭಿನ್ನದೇಹದಲಿ ಅನ್ಯಜೀವ ಮೈತಾಳಿ ಬರುವ'' ಎಂಬ ವರ್ಣನೆ ಮಾರ್ಮಿಕವಾಗಿದೆ. ಜೀವ-ಲೋಕದ ಕಾಮವೆಂಬುದನ್ನು ಇಲ್ಲಿ ಕಾಯಾ-ವಾಚಾ-ಮಸನಾ ಎಂದು ಸುಲಭ ರೀತಿಯಲ್ಲಿ ವಿಂಗಡಿಸಿ ನಿರೂಪಿಸಲಾಗಿದೆ. ಇದರಲ್ಲಿ ಕಾಮಿ ಬಗ್ಗುವನೆಂಬ ಮಾತಿಗಿಂತ ನುಗ್ಗುವನೆಂಬ ಮಾತು ದಿಟವಾದ ಸಂಗತಿಯು. ದೇವರಿಗೆ ಭಕ್ತ ಬಗ್ಗುವುದೇ ಸುಂದರ ರೀತಿಯು. ಜೊತೆ ಜೊತೆಯ ಸಂಗತಿಗೆ ಅವಲಂಬಿತವಾದ ಈ ಕಾಮದ ತೂಕ ಸಮತೂಕವಾದಾಗ ಮಾತ್ರ ಸೊಗಸೆಂದು, ಆ ಸಾಮ್ಯತೆಗೆ ವಿಷಮತೆಯ ದೋಷವಿಲ್ಲದ ಶ್ರೀ ಹರಿಯೊಬ್ಬನೇ ನಿಜವಾಗಿ ಕಾರಣನೆಂದು ನಿರೂಪಿಸುತ್ತ

**''ಒಂದೆ ನೂಲ ಒಂದೊಂದು ವಿಧದಿ ಬಿಗಿದಾನು ಒಬ್ಬ ಅವಿತು''** ಎಂದು

ಹೇಳುವ ಶೈಲಿಯು ಹೃದಯಂಗಮವು. ಈ ಬಗ್ಗೆ ಇನ್ನೂ ಹೆಚ್ಚಿನದಾದ ಧ್ವನ್ಯರ್ಥಗಳನ್ನು ವಾಚಕರು ಅಲ್ಲಿಯೇ ಮನಗಾಣುವಂತಾಗಲಿ.

**ಪ್ರಕೃತ ಕಾವ್ಯದಲ್ಲಿ ಕಾಮ :**

ಇದಿಷ್ಟು ಪ್ರಾಸಂಗಿಕ ಕಾಮಜಿಜ್ಞಾಸೆ. ಪ್ರಕೃತ ವಿಷಯಕ್ಕೆ ಬಂದರೆ, ರುಕ್ಮಿಣೀ, ಶಿಶುಪಾಲ, ಶ್ರೀ ಕೃಷ್ಣ ಇವರ ಕಾಮದ ವಿಶ್ಲೇಷಣೆಗೆ ಪ್ರವೃತ್ತರಾಗಬೇಕಷ್ಟೆ. ಅಲ್ಲಿ ರುಕ್ಮಿಣಿಯ ಕಾಮದ ವಿಶ್ಲೇಷಣೆ ಮಾತು –ಅರ್ಥ, ಶ್ರುತಿ–ಪರಬ್ರಹ್ಮ, ಸಂಪತ್ತು–ಶ್ರೀಹರಿ, ಇವುಗಳ ಸಂಯೋಗವೇ ರುಕ್ಮಿಣೀ ಶ್ರೀ ಕೃಷ್ಣ ಮಿಲನವೆಂಬ ಭಾವನೆಯಿಂದ ರುಕ್ಮಿಣಿಯ ಕಾಮ ಪ್ರತಿ ಜೀವರ ಜೀವನದ ಅವಿಭಾಜ್ಯ–ಸಂಗತಿಯೆಂದು ಗೋಚರವಾಗುತ್ತಿದೆ. ಈ ಸಂದರ್ಭದಲ್ಲಿ ಕಾಮದಹನದ ಸಂಗತಿಯ ಹಿನ್ನೆಲೆಯಿಟ್ಟು ಸುಂದರವಾಗಿ ಮೂಡಿಬಂದ ನಿರೂಪಣೆಯೊಂದು ಅವಿಸ್ಮರಣೀಯ.

**ತನ್ನ ಕೂಸು ಆ ಕಾಮ, ಮತ್ತೆ ತ–ನ್ನಲ್ಲೆ ಜನಿಸಲೆಂದು,**
**ತಾಯಿಯಾಸೆ, ರು–ಕ್ಮಿಣಿಯ ಮನದಿ ಇರ–ಬಹುದು ಲಕುಮಿಗಂದು ॥**
**ಕೃಷ್ಣನಿಂದ ಜನಿ–ಸಿದರೆ ಮಾತ್ರ, ಆ–ಕರ್ಷಕತ್ವ ಮತ್ತೆ**
**ಕಾಮನಲ್ಲಿ ಮೈ–ಗೂಡಬಹುದು ಎಂ–ದವಳಿಗನ್ನಿಸಿತ್ತೆ?**

ಇದು ಎಷ್ಟು ಹಿತವಾದ ವರ್ಣನೆಯೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಯದ್ಯಪಿ ಲಕುಮಿಯ ಪುತ್ರನಾದ ಕಾಮನು ದಗ್ಧನಾದ ಮೇಲೆ ಸ್ಕಂದನಾಗಿ ಪುನರುತ್ಥಾನ ಪಡೆದಿದ್ದ. ಆದರೂ ಲಕುಮಿ–ಯಲ್ಲೇ ಅವನ ಪುನರುತ್ಥಾನ. ಜಗತ್ತಿಗೆ ಆವಶ್ಯಕ. ಲಯಕಾರಕನೆಂದು ಹೆಸರಾದ ಶಿವನ ಮಗನಾಗಿ ಬಂದರೆ ಕಾಮನು ಆಕರ್ಷಕನಾಗಲು ಸಾಧ್ಯವೆ? ಆದ್ದರಿಂದ ಸಕಲಾರ್ಷಣೆಯ ಮೂರ್ತಿಯಾಗಿ ಶ್ರೀ ಕೃಷ್ಣನೆಂದೇ ಹೆಸರುವಾಸಿಯಾದ ಈ ರೂಪದಿಂದ ಕಾಮನ ಪುನರುತ್ಥಾನ ಈ ರುಕ್ಮಿಣೀಕಲ್ಯಾಣ–ವೆಂಬ ಕವಿಗಳ ಬಣ್ಣನೆ ಅಮೋಘವಾಗಿದೆ.

ರುಕ್ಮಿಣಿಯ ಆಸೆ ಶ್ರೀ ಕೃಷ್ಣನಿಗಾದರೆ, ರುಕ್ಮಿಣಿಯ ಅಣ್ಣನಾದ ರುಕ್ಮಿಯು, ಶಿಶುಪಾಲನಿಗೆ ತಂಗಿಯನ್ನು ನೀಡಲು ದೀಕ್ಷೆ ತೊಟ್ಟನೆಂಬುದನ್ನೂ ಕವಿಯು ದಿನನಿತ್ಯದ ಜೀವನಕ್ರಮದಂತೆ ಬಣ್ಣಿಸಿದ್ದು ಸಮಾಜಕ್ಕೆ ಎಚ್ಚರ ನೀಡುತ್ತಿದೆ. ಸಂಪತ್ತಿನ ಅಭಿಮಾನಿಯಾದ ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡುವುದು, ಸಂಪತ್ತನ್ನು ಕೇವಲ ಶಿಶುಪಾಲ (ಕೂಸು ಸಾಕುವ ಹೆಂಡತಿ ಮುಂತಾದವರು)ನಿಗೆ ನೀಡುವ ಮೋಹಿ ಜನರ ಜೀವನ ಎರಡೂ ಒಂದೇ ಎಂದು ನಿರೂಪಿಸಿದ್ದಕ್ಕೆ ಯಾರು ತಕರಾರು ಮಾಡಲಾ–ದೀತು? ಆದ್ದರಿಂದ ರುಕ್ಮಿಣೀ ಕಲ್ಯಾಣ ನಮ್ಮ ಜೀವನದ ನಿತ್ಯ ಘಟನೆ. ಮತ್ತೆ ಇದೇ ಸನ್ನಿವೇಶದಲ್ಲಿ ಶಿಶುಪಾಲನ ಕಾಮವನ್ನು ಶ್ರೀ ವೈಷ್ಣವರ ಸಿದ್ಧಾಂತಕ್ಕೆ ಹೋಲಿಸಿದ್ದು

**ತ್ವದೈಕ್ಯಮಂತಃ ಸ್ಮರತಾಂಜನಾನಾಂ....**

ಎಂಬ ರುಕ್ಮಿಣೀಶವಿಜಯದಲ್ಲಿ ಬಂದ ರುಕ್ಮಿಣೀ ಪತ್ರದ ವಿಚಾರದ ಅಂತರಂಗವನ್ನು ಬಹಿರಂಗ–ಗೊಳಿಸುತ್ತಿದೆಯೆಂದು ತಿಳಿಯಬಹುದು. ಶ್ರೀ ಕೃಷ್ಣನೊಡನೆ ಆನಂದ ಸಾಮ್ಯವನ್ನು ಹೇಳುವ 'ಶ್ರೀ' ವೈಷ್ಣವ ಸಿದ್ಧಾಂತ ಶ್ರೀಪತಿತ್ವಾಪಾದಕವಾಗಿರುವುದು ಗುರುವಾದಿರಾಜರ ಯುಕ್ತಿಮಲ್ಲಿಕಾದಿಗಳಿಂದ ಸುವಿದಿತವು. ಆದ್ದರಿಂದ ಶ್ರೀ ವೈಷ್ಣವತತ್ವ ಹಾಗು ಶಿಶುಪಾಲಕಾಮ ಎರಡೂ ಬೇರೆ ಹೇಗೆ?

ಸರ್ವಜ್ಞ ಶಿರೋಮಣಿ ಶ್ರೀ ಕೃಷ್ಣ ರುಕ್ಮಿಣಿಯ ಸ್ಥಿತಿಗತಿಯನ್ನು ತಾನೇ ಬಲ್ಲವನಾಗಿ ಕಾರ್ಯಪ್ರವೃತ್ತನಾಗದೆ ಪತ್ರದ ಮೂಲಕ ಪ್ರಾರ್ಥಿತನಾಗಿ ಪ್ರವೃತ್ತನಾಗಿದ್ದಕ್ಕೆ ಕಾರಣವಾಗಿ ಕೃಷ್ಣ-ಕಾಮದ ವಿಶ್ಲೇಷಣೆ ಪ್ರಾಮಾಣಿಕವಾಗಿದೆ. ಇಲ್ಲಿ ಶ್ರೀ ಕೃಷ್ಣ ರುಕ್ಮಿಣಿಯ ಪತ್ರಕ್ಕೆ ಪ್ರತಿಯಾಗಿ ಕರೆದೊಯ್ಯಲು ಕುಂಡಿನಾಪುರಕ್ಕೆ ಬಂದು ಅವಳೆದುರು ರಥವನ್ನು ನಿಲ್ಲಿಸುವುದಷ್ಟೆ ಅಲ್ಲದೆ ಮನೋ-ರಥದೊಳಗೆ ಸ್ಥಾನನೀಡುವ ಮಾತು ಹೃದಯಂಗಮವಾಗಿದೆ. ಇದರಿಂದ ರುಕ್ಮಿಣಿಯ ಮುಂದೆ ಶ್ರೀ ಕೃಷ್ಣನ ಮನೋರಥ ತಂದಿಡುವ ರೀತಿಯಲ್ಲಿ ''ವಿಪ್ರಪ್ರತಿಸಂದೇಶ'' ರಚನೆಯ ಆವಶ್ಯಕತೆಯನ್ನೂ ಇದೇ ಕನ್ನಡ ಕವಿಗಳು ಸಂಸ್ಕೃತ ಸಾಹಿತ್ಯದಲ್ಲಿ ಅದನ್ನು ರಚಿಸಿರುವುದನ್ನೂ ಸೂಚಿಸಿದ್ದಾರೆ. ಹಾಗು ಈ ಪ್ರತಿಸಂದೇಶ ಕವಿತೆಯ ಸ್ವಾರಸ್ಯದ ಆಸ್ವಾದನಕ್ಕೆ ರಸಿಕ ಸಮಾಜವು ಸ್ವಲ್ಪಕಾಲ ನಿರೀಕ್ಷಿಸಬೇಕಾಗಿ-ರುವುದು ಅನಿವಾರ್ಯವು.

ಇದರ ಬಗ್ಗೆ ಹೇಳುವಾಗ, ವಿಪ್ರನ ಬಗ್ಗೆ ನಿರೂಪಿಸುವುದು ಅಗತ್ಯ. ಇಲ್ಲಿ 'ವಿ' ಎಂದರೆ ವಿಶಿಷ್ಟ 'ಪ್ರ' ಎಂದರೆ ಪ್ರಕೃಷ್ಟ, ಈ ಕ್ರಮದಲ್ಲಿ ಶ್ರೀ ಹರಿ ಸರ್ವೋತ್ತಮ ವಾಯು ಜೀವೋತ್ತಮ ತತ್ವಜ್ಞಾನಿಯಲ್ಲಿ ಇದರ ಸಮನ್ವಯ ಪೂರ್ವಕವಾದ 'ವಿ-ಪ್ರ' ಶಬ್ದಾರ್ಥವು ಆಧುನಿಕ ವಿಮರ್ಶಕರ ಪಾಲಿಗೆ ಹಾಲಾಹಲವಾದರೂ ಪ್ರಾಮಾಣಿಕ ಸಹೃದಯರ ಮನಸ್ಸಿಗಾನಂದ ನೀಡುವ ಸಂಗತಿಯು. ಇದರಿಂದ ಕನ್ನಡದ ವಿಪ್ರಸಂದೇಶ ಕೇವಲ ಜನಮೆಚ್ಚುಗೆಯ ಕೃತಿಯಾಗಿರದೆ ಸಜ್ಜನರ ಮೆಚ್ಚುಗೆಯ ಧ್ಯೇಯವನ್ನು ತೆರೆದಿಡುತ್ತಿದೆ. ಇಲ್ಲಿ ರುಕ್ಮಿಣಿಯ ವಿವಕ್ಷೆಯಲ್ಲಿ ಸಂದೇಶದ ಮಾತುಗಳೇ ವಿಪ್ರ ಎಂದು, ಕೃಷ್ಣನ ವಿವಕ್ಷೆಯಲ್ಲಿ ಪತ್ರವೇ ವಿಪ್ರ ಎಂದು, ಕವಿಗೆ ಈ ಕೃತಿಯೇ ವಿಪ್ರ ಎಂದು ವರ್ಣಿಸುವ ವಿಧಾನ ಅತ್ಯಮೋಘವಾಗಿದೆ.

**ನಯನ ತೀರ್ಥದಲಿ ಪೂತನಾಗಿ ನಿ-ಟ್ಟುಸಿರ ಪಥದಿ ಬಂದು**
**ಗೂಢ ಅನಲ ಮಥಿ-ಸುತ್ತ ಪ್ರಕಟಶಿಖಿ-ಯಾಗಿ ಒಡನೆ ತಂದು ॥**
**ಕೆಟ್ಟ ವಿಷಯ ಆ-ಹುತಿಯ ಕೊಟ್ಟು ಇ-ಷ್ಟಾರ್ಥ ಹೊತ್ತ ತಾನು**
**ಮುಖದ ವರ್ಣ, ಮುಖ-ಜಾತ ವರ್ಣವರ ವಿಪ್ರನಲ್ಲವೇನು ?**

ರುಕ್ಮಿಣಿಯು ವಿರಹವೇದನೆಯ ಕಣ್ಣೀರಿನೊಡನೆ ನುಡಿದ ಮಾತುಗಳೇ ವಿಪ್ರನ ರೂಪತಾಳಿ ದ್ವಾರಕೆಗೆ ತಲುಪಿರಬೇಕೆಂಬ ರೀತಿಯ ಬಣ್ಣನೆ ಅತ್ಯಪೂರ್ವವಾಗಿದೆ. ರುಕ್ಮಿಣಿಯ ಮಾತು, ನಯನ ತೀರ್ಥದೊಡನೆ ನಿಟ್ಟುಸಿರ ದಾರಿಯಲ್ಲಿ, ಹೃದಯದಲ್ಲಡಗಿರುವ ಗಾಢವಾದ ನಿಗೂಢವಾದ ಕಾಮಾಗ್ನಿಯ ಮಥನಪೂರ್ವಕ ಪ್ರಾಕಟ್ಯವನ್ನು ತಂದು, ರುಕ್ಮಿ ಪ್ರಭೃತಿಗಳ ದುರಾಲೋಚನೆಯ ಮುರಿವಂತೆ, ಹಾಗು ಇಷ್ಟಾರ್ಥ ಕೈಗೂಡುವಂತೆ ಮೈತಾಳಿರುವುದೇ, ವಿಪ್ರನಲ್ಲಿಯೂ ಸಮವಾಗಿ ಅನ್ವಯಿಸುವ ಸಂಗತಿ. ವಿಪ್ರನೂ ಸಹ ತೀರ್ಥದಲ್ಲಿ ಮುಳುಗಿ, ಉಸಿರ ಪಥ ಅಂದರೆ ವಾಯು-ದೇವರ ಮಧ್ವಮತದ ಪಥದಲ್ಲಿ, ಅರಣಿ ಮಥನ ಪೂರ್ವಕ ಆಹಿತಾಗ್ನಿಯಾಗಿ, ದುರ್ಮತಗಳ ನಿರಾಕರಿಸುತ್ತ ಇಷ್ಟಾರ್ಥ ನೀಡುವ ಸಮರ್ಥ ವ್ಯಕ್ತಿಯಷ್ಟೆ. ಇದಲ್ಲದೆ, ಮಾತು – ವಿಪ್ರ ಇವೆರಡೂ ಮುಖದಿಂದಲೇ ಆವಿಷ್ಕಾರಗೊಂಡಿದ್ದು ಮಾರ್ಮಿಕವಾದ ಅಂಶ. ಆದ್ದರಿಂದ

"ಮುಖದ ವರ್ಣ ಮುಖಜಾತವರ್ಣವರ ವಿಪ್ರನಲ್ಲವೇನು?"

ಎಂಬ ಕವಿವಾಣಿಗೆ ಎದುರು ಮಾತುಗಳೇ ಬರಲಾರದು.

ಇದರಂತೆ ಕೃಷ್ಣನ ವಿಪ್ರನ ಬಗ್ಗೆ ಹೇಳುವಾಗ, ಪತ್ರಕ್ಕೂ ವಿಪ್ರನಿಗೂ ಸಮನಾಗಿ ಅನ್ವಯಿಸುವಂತೆ

**ಶ್ರುತಿಯ ಆದರವ ಗಳಿಸಿ ಮೆರೆವ ಸುಖ-ತೀರ್ಥದರಳಿ ಬಂದ**
**ಹೃದಯ ರೋಗ ಪರಿ-ಹರಿಸಲೌಷಧ-ವಾಗಿ ಮೆಹಿಮೆ ಪಡೆದ ॥**
**ಕೃಷ್ಣನೊಲುಮೆ ಗಳಿ-ಸೋಕೆ ಮೂಲ ಆ ಪತ್ರ ತುಲಸಿ ಪತ್ರ**
**ವಿಪ್ರರೂಪ ಪಡೆ-ದಿತ್ತು ಮತ್ತೆ ಮರೆ-ಯುತ್ತ ಕೃಷ್ಣನತ್ತ**

ಎಂಬ ಪದ್ಯವು ಸಹೃದಯ ಹೃದಯ ಚಮತ್ಕಾರ ಅತಿಶಯವನ್ನು ಬಿತ್ತುತ್ತಿದೆ. ಇಲ್ಲಿ ವಿಪ್ರ – ಪತ್ರ –ತುಳಸೀಪತ್ರಗಳ ಸಮಾನರೂಪ ವಿಶೇಷಣಗಳ ಪ್ರಯೋಗ ಹೊಸದಾದ ಅಲಂಕಾರದ ಆವಿಷ್ಕಾರ ವೆಂದೇ ಕಾವ್ಯಪ್ರಪಂಚದ ಜನತೆ ಚಿಂತನ ನಡೆಸಬೇಕಾದ ಅಪೂರ್ವ ಸಂಗತಿಯು. ಹೀಗೆಯೇ ಕವಿವಿವಕ್ಷೆಯ ವಿಪ್ರಸ್ವರೂಪದಲ್ಲಿ ಈ ಕೃತಿಯನ್ನು ಬಣ್ಣಿಸಿದ ರೀತಿಯನ್ನು ವಾಚಕರು ಆಸ್ವಾದಿಸಿ ಆನಂದಿಸುವಂತಾಗಲಿ.

**ಕವಿ-ಪಂಡಿತರಾಜರ ಬಗ್ಗೆ**

ಈ ಬಗ್ಗೆ ನುಡಿವಾಗ ಅವರ ಮೊಮ್ಮಕ್ಕಳಾದ ಈ ಕಾವ್ಯಕಾರರ ಮಾತುಗಳಲ್ಲಿ ಮಾಡಿರುವ ಹೆಮ್ಮೆಯ ಭಾವ ಎಂಥವರಿಗೂ ಅರಿವಾಗುವ ಸಂಗತಿಯು. ಇಲ್ಲಿ ಮೊದಲಿಗೆ ಆಚಾರ್ಯರ ಈ ಕೃತಿಯ ರಚನೆಗೆ ಹಿನ್ನೆಲೆಯಾದ ಘಟನೆಯನ್ನು "ಧರ್ಮ ದೇವತೆಯ ಅಗಲಿ..." ಎಂಬ ಪದ್ಯದಲ್ಲಿ ಸೂಚಿಸಲಾಗಿದೆ. ಆಚಾರ್ಯರು ತಮ್ಮ ದ್ವಿತೀಯ ಪುತ್ರಿಯಾದ ಸೌ. ಸರಸ್ವತೀಬಾಯಿಯ ಅಪ್ರೌಢ ವಿವಾಹದ ಧರ್ಮಸಾಧನೆಗಾಗಿ ಅಡಚಣೆ ಬಂದಾಗ, ಈ ಕೃತಿಯನ್ನು ಕುಲದೇವತೆಯಾದ ತಿರುಪತಿಯ ಶ್ರೀನಿವಾಸದೇವರಿಗೆ ಸಮರ್ಪಿಸಿ, ಅದರ ಪುಣ್ಯಪ್ರಭಾವದಿಂದ ಇಟ್ಟ ಮುಹೂರ್ತದಲ್ಲೇ ಮಗಳ ಮದುವೆ ನೆರವೇರಿಸಿ, ಧರ್ಮಸಾಧನೆಗೈದರೆಂಬ ಘಟನೆಯನ್ನು ಇಲ್ಲಿ ಹೀಗೆ ಬಣ್ಣಿಸಲಾಗಿದೆ. ಆಚಾರ್ಯರ ಕೃತಿಯೆಂಬ ರುಕ್ಮಿಣಿಯ ಧರ್ಮವೆಂಬ ಶ್ರೀ ಕೃಷ್ಣಮಿಲನಕ್ಕೆ ಅರ್ಪಿಸಿದ ಭಕ್ತಿಯ ತುಲಸಿಪತ್ರವೇ ಈ ರುಕ್ಮಿಣೀಸಂದೇಶ ಪತ್ರವಾಗಿ ಹೊರಹೊಮ್ಮಿತೆಂದು ಮೊಮ್ಮಕ್ಕಳಾದ ಈ ಕವಿಗಳ ಬಣ್ಣನೆ ಆಚಾರ್ಯರ ಸುಪ್ರೀತಿಗೆ ಪಾತ್ರವಾಗುವುದರಲ್ಲಿ ಸಂದೇಹವೇ ಇಲ್ಲ. ವೈದಿಕ ವಿರಕ್ತವಿದ್ವಾಂಸರಾದ ಆಚಾರ್ಯರ ಲೇಖನಿಯಲ್ಲಿ ಮೂಡಿರುವ ಈ ಶೃಂಗಾರ ಕಾವ್ಯದ ಸೊಬಗು ಅಚ್ಚರಿಯ ವಿಷಯವಾದರೂ, ತ್ಯಾಗ-ಭೋಗ ಆಸಕ್ತಿ ಯೋಗದ ಪರಿಚಯ ವೆಂದು ಭಾಗಣ್ಣದಾಸರ ಸ್ಮರಣೆ ಆಗುವಂತೆ ಇಲ್ಲಿರುವ ವರ್ಣನೆ ಬಹುಸುಂದರವಾಗಿದೆ.

ಈ ಕಾವ್ಯದ ಸಾರವನ್ನೆಲ್ಲ ಒಂದೇ ಪದ್ಯದಲ್ಲಿ ನಿರೂಪಿಸಿದ್ದಂತು ಅತ್ಯಂತ ಸೊಗಸಾಗಿದೆ. ಸಂದೇಶ ಕಾವ್ಯವು ಕೇವಲ ಕಾಮಿಗಳಿಬ್ಬರ ಅಂತರಂಗದ ಘಟನೆಯಾದರೆ ಸಮಾಜಕ್ಕೆ ಏನೂ ಉಪಯೋಗವಾಗದು. ಅದರ ಹಿನ್ನೆಲೆಯಲ್ಲಿ ಸಮಾಜಕ್ಕೆ ಬೇಕಾದ ಸಂಗತಿಯ ನಿರೂಪಣೆಯಿದ್ದರೆ ಮಾತ್ರ ಅದು ನಿಜವಾದ ಸಂದೇಶ ಕಾವ್ಯ. ಈ ಕಾವ್ಯದಲ್ಲಿ ಜಗತ್ತಿಗೆ ಪೂಜ್ಯ ಆಚಾರ್ಯರು ನೀಡಿದ ಸಂದೇಶ ಹಲವಾರು.

ರುಕ್ಮಿಣಿಯು ವಿಪ್ರನೆದುರು ವಿನಯದಿಂದ ಮಾತಾಡುವುದು, ವಚನ-ವಿನಯಗಳ ಮಿಲನ. ವಿಪ್ರನ ಸಂಚಾರಕ್ಕೆ ಮಾರ್ಗನಿರೂಪಣೆ ಸಂಚಾರ-ಸನ್ಮಾರ್ಗಗಳ ಮಿಲನ. ವಿಪ್ರನಿಗೆ ವಿಂಧ್ಯದಲ್ಲಿ ಆತಿಥ್ಯವೆಂಬುದು ಸತ್ಕಾರ - ಅತಿಥಿಗಳ ಮಿಲನ. ಸಿಂಹಿಣಿಗಲು ಜಿಂಕೆ ಮರಿಗಳಿಗೆ ಮೊಲೆಹಾಲು ನೀಡುವ ಸಂಗತಿ ಮೊಲೆಹಾಲು - ಕೂಸುಗಳ ಮಿಲನ. ಬಿಂದುಸರದಲ್ಲಿ ಬ್ರಾಹ್ಮಣನ ಆಹ್ನೀಕವು ಸ್ನಾನ-ಪಾನಗಳ ಮಿಲನ. ಭೂತಪತಿ ಶಿವ-ಪಾರ್ವತಿಯರ ಬಣ್ಣನೆ ಸತಿ-ಪತಿಯರ ಮಿಲನ. ವಿಂಧ್ಯದಲ್ಲಿ ಯಾಜ್ಞಿಕರ ಮಹಿಮೆ ತ್ಯಾಗ-ಯಾಗಗಳ ಮಿಲನ. ಅಲ್ಲಿ ವಿಪ್ರನ ಭೋಜನವು ಅನ್ನ-ಪ್ರಾಣಗಳ ಮಿಥುನ. ಮುಂದೆ ಗೋಪಿಕೆಯರ ಬಣ್ಣನೆ ನಿಷ್ಕಾಮ-ಧರ್ಮಗಳ ಹಾಗು ದಾಸ -ಈಶ ಮಿಲನವೆಂಬ ಸೂಕ್ಷ್ಮ ವಿಶ್ಲೇಷಣೆ ಇಲ್ಲಿ ಮನನೀಯವಾಗಿದೆ. ಈ ಜೋಡಿಗಳು ಎಂದಿಗೂ ಅಗಲದಿರ-ಬೇಕೆಂಬುದೇ ಈ ಸಂದೇಶ ಕಾವ್ಯದ ಸಂದೇಶವು.

ಪೂಜ್ಯ ಆಚಾರ್ಯರು ಈ ಕಾವ್ಯ ರಚಿಸಿರುವುದಕ್ಕೆ ಪೂರ್ವದಲ್ಲಿ ಹತ್ತಾರು ಸಂದೇಶ-ಕಾವ್ಯಗಳ ಆವಿಷ್ಕಾರವಾಗಿದೆ. ಅದರಲ್ಲಿ ಮೇಘದೂತಪಾಳೇಗಾರನಂತೆ ಮೆರೆದಿರುವ ಸಂಗತಿ ಅಸತ್ಯವೇನಲ್ಲ, ಅದನ್ನು ಮನದಲ್ಲಿಟ್ಟುಕೊಂಡು ಆಚಾರ್ಯರ ಬಗ್ಗೆ ಕವಿಯಾಡಿದ ಮಾತು ನಿಜವಾಗಿ ಆಲೋಚಿಸಬೇಕಾದ ಸಂಗತಿಯು. ಏನೂ ಇಲ್ಲದಾಗ ಬಂದ ಕೃತಿಗಳಿಗಿಂತ ಎಲ್ಲ ಕೃತಿಗಳ ನಂತರ ವಿನೂತನ ಆವಿಷ್ಕಾರ ಎಷ್ಟು ಕಠಿಣವೆಂಬುದು ಕೃತಿಕಾರನಿಗೇ ಅರ್ಥವಾಗುವ ವಿಚಾರ. ಮೇಘ-ದೂತಾದಿಗಳನ್ನು ಓದಿದ ಮೇಲೂ ''ವಿಪ್ರಸಂದೇಶ'' ಆಕರ್ಷಣೆ ಮಾಡಿರುವ ಸೊಬಗಂತೂ, ''ಉಂಡ ಒಡಲ ಹಸಿವೆಬ್ಬಿಸುತ್ತ ಉಣ್ಣಿಸಿದ ಕೆಲವೆಂದು ಪೀಠಿಕೆಯಲ್ಲಿ ಬಣ್ಣಿಸುವ ಕ್ರಮ ಅತಿ-ಶಯೋಕ್ತಿಯಂತೂ ಅಲ್ಲ.

ಮಂದಾಕ್ರಾಂತ ವೃತ್ತದ ಬಗ್ಗೆ ಹೇಳುವಾಗ ಮಾಡಿರುವ ವಿವರಣೆಗೆ ಸ್ವಲ್ಪ ವಿವರಿಸುವ ಆವಶ್ಯಕತೆಯಿದೆ. ಕಾಳಿದಾಸನು ರಘುವಂಶದಲ್ಲಿ ''ಮಂದಃ ಕವಿಯಶಃಪ್ರಾರ್ಥೀ'' ಎಂದು ತನ್ನನ್ನು 'ಮಂದ' ಎಂದು ನುಡಿದಿದ್ದಾನೆ. ಅದನ್ನು ನಿರೂಪಿಸುವಂತೆ ಪೂಜ್ಯ ಆಚಾರ್ಯರ ಈ ಕವಿತೆಗೆ 'ಮಂದ ಆಕ್ರಾಂತ' ಛಂದಸ್ಸು ಆವಶ್ಯಕವಾಗಿರಬೇಕೆಂಬ ಬಣ್ಣನೆ ಚಮತ್ಕಾರಿಕವಾಗಿದೆ. ಮೇಘದೂತದಲ್ಲಿ ಬರುವ ಅರ್ಥಾಂತರನ್ಯಾಸಕ್ಕೆ ಹಲವೆಡೆ ಆಚಾರ್ಯರು ವಿಮರ್ಶಿಸಿದ್ದನ್ನು ಮನದಲ್ಲಿಟ್ಟು ಈ ಮಾತು ಬಂದಿರಬೇಕೆಂದು ಊಹಿಸಬಹುದು. ಇಲ್ಲಿ ಮೇಘದೂತಕ್ಕಿಂತ ರುಕ್ಮಿಣಿಯ ಸಂದೇಶಕ್ಕೆ ಈ ಛಂದಸ್ಸು ಅಂದವಾಗಿ ಹೊಂದುವುದೆಂಬ ಬಣ್ಣನೆ ಅರ್ಥಪೂರ್ಣವಾಗಿದೆ.

**''ನಲ್ಲೆ ವಲ್ಲಭನ ಎದೆ ಮೆಲ್ಲ ನುಗ್ಗಿದರೆ ಮಾತ್ರ ಅಂದ**<br>
**ಹಾಗೆ ಅವಳ ಮಾತಲ್ಲಿ 'ಮಂದ-ಆಕ್ರಾಂತ ಛಂದ ಛಂದ'**

ಈ ಮಾತು ಎಷ್ಟು ರಮಣೀಯವಾಗಿದೆ ಅಲ್ಲವೆ? ಇದರ ಮುಂದೆ

**''ಕಾಮವೇಗದಲಿ ಗುಡುಗುತಿರುವ ಮಾತಲ್ಲಿ ನಡತೆಯಲ್ಲಿ**<br>
**ಮಂದ ಮಾತ್ರ ಈ ಛಂದ ಹಿಡಿದು ಒದ್ದಾಡುತಾನೆ ಬಳಲಿ''**

ಎಂದು ಹೇಳಿದ್ದು ಮೇಘದೂತವನ್ನು ಕಟಾಕ್ಷೀಕರಿಸಿದ್ದೆಂದು ಪ್ರತ್ಯೇಕ ಹೇಳುವುದೇನಿದೆ?

ಹೀಗೆ ಕನ್ನಡದ ಕವಿಗಳು ವಿಪ್ರಸಂದೇಶ ಪೀಠಿಕೆಯಲ್ಲಿ ವಿಧವಿಧದ ನಿರೂಪಣೆ ಮಾಡುತ್ತ ಮೇಘ-ದೂತಾದಿಗಳು ಪೂರ್ವಪಕ್ಷವೆಂದು ವಿಪ್ರಸಂದೇಶವು ಸಿದ್ಧಾಂತವೆಂದು ಸಾರುತ್ತ ಈ ಕವಿತೆ

**"ಗುರುವಾದಿರಾಜ ಶಿಷ್ಯತ್ವ ಪಟ್ಟ ಬೆನ್ನಟ್ಟ ಬಂದ ಹಬ್ಬ"**

ಎಂದು ಸುಂದರವಾಗಿ ಮುಕ್ತಾಯ ಮಾಡಿದ್ದಾರೆ.

**"ನಿನ್ನ ದೂತ ಗರಿ ಗರುಡನಿದಿರು ಕಳುಹುವರು ಗುಬ್ಬಿಯೊಂದು**
**ಅಂಚೆ ಕೊಂಚೆ ಶುಕ ಕಾಕ ಕೋಕ ಬಕ ಬೇಕಿ ಕೇಕಿ ಎಂದು"**

ಎಂದು ಬೇಂದ್ರೆಯವರು ಪೀಠಿಕೆಯಲ್ಲಿ ಹೇಳಿದ್ದನ್ನು ಇಲ್ಲಿ

"ಗರುಡನೊಡೆಯ ಹಣಮಣಿದ ವಿಪ್ರನೆದುರೇನು ಗರುಡ ಹಿರಿದು" ಎಂದು ಮಾರ್ಮಿಕವಾಗಿ ಟೀಕಿಸಿದ್ದು ಅಭಿಮಾನಗರ್ಭಿತವಾಗಿದೆ. ಕೊನೆಗೆ ಆಚಾರ್ಯರ ಕವಿತೆಯ ಭಾವನೆಯ ಕಡಲನ್ನು ಪೂರ್ಣ ಗ್ರಹಿಸುವುದು ಅಸಾಧ್ಯವೆಂದು ನಿರೂಪಿಸುತ್ತ ಭಾವಸಾಗರದ ಅಲೆಯೊಂದಕ್ಕೆ ತಲೆಬಾಗುವುದೇ ಈ ಕನ್ನಡ ವಿಪ್ರಸಂದೇಶವೆಂಬ ಮಾತು, ಮೊಮ್ಮಕ್ಕಳಾದ ಈ ಕಾವ್ಯಕಾರರಿಗೆ ಅಜ್ಜನ ಮೇಲಿರುವ ಭಕ್ತಿ ಭಾವುಕತೆಯ ಸಲ್ಲಕ್ಷಣವಾಗಿದೆ. ಸಮುದ್ರದ ಸ್ನಾನ ಹೆದರಿಕೆ ತರುವ ಕೆಲಸ. ಹಾಗಾಗಿ

**"ತಂದೆ ತಾಯಿ ಈ ಕೂಸಿನಾಟ ಹರಸುತ್ತ ಕಾಯುತಿರಲಿ"**

ಎಂದು ಈ ಕನ್ನಡ ಕವಿತೆಯ ಸಾಹಸಕ್ಕೆ ಮಾತಾಪಿತೃಗಳನ್ನು ಬೇಡುವುದು ಕವಿಗಳ ಓನ್ನತ್ಯವನ್ನು ಸಾರುತ್ತಿದೆ. ಕೊನೆಗೆ ಉಪಸಂಹಾರದಲ್ಲಿ, ಈ ಕನ್ನಡ ಕವಿತೆ ಚಿಗುರು ಹುಲ್ಲಿನಂತೆ ಹಗುರವಾದ ಕೃತಿಯೆಂದು ವಿನಯಪೂರ್ವಕವಾಗಿ ಈ ಕವಿಗಳು ಬಣ್ಣಿಸುತ್ತ 25ನೇ ವರ್ಷದ ಆಚಾರ್ಯರ ಪುಣ್ಯ-ಸ್ಮರಣೆಯ ಈ ರಜತ ಮಹೋತ್ಸವದ ಅಂಗವಾಗಿ ಈ ಕೃತಿಯನ್ನು ಆಚಾರ್ಯರ ಅಂತರ್ಗತ ಹಯವದನ ದೇವರಿಗೆ ಸಮರ್ಪಿಸುವ ರೀತಿ ಸರ್ವೋತ್ಕೃಷ್ಟವಾಗಿದೆ.

**"ನೆನಪಿನಂಗಳದ ಬೆಳ್ಳಿ ತಟ್ಟೆಯಲಿ ಇಟ್ಟೆ ಗರಿಕೆಯೊಂದು**
**ಶ್ರೀನಿವಾಸಕವಿಗೊಲಿದ ಕುದುರೆಗಿದು ಇಷ್ಟವಾಗಲೆಂದು"**

ಈ ಮಾತು ಮಾಧ್ವಕವಿಪರಂಪರೆಗೆ ಮಾತ್ರ ಒಲಿಯುವುದೆಂಬ ಸಂಗತಿ ಬೇಂದ್ರೆಯವರ ಪೀಠಿಕೆ ಓದಿದವರಿಗೆ ಸ್ಪಷ್ಟವಾಗುತ್ತದೆ.

ಹೀಗೆ ಇದುವರೆಗೆ ಕನ್ನಡ ವಿಪ್ರಸಂದೇಶದ ಪೀಠಿಕೆಯಲ್ಲಿ ಬಂದ ಅನೇಕ ವಿಷಯಗಳ ಪರಿಚಯವನ್ನು ಮಾಡಿರುತ್ತೇನೆ. 40 ಪದ್ಯಗಳ ಪೀಠಿಕೆಯ ಪರಿಚಯಕ್ಕೆ ಇಷ್ಟು ಬರೆಯಬೇಕಾದರೆ, 180ಕ್ಕಿಂತ ಮಿಗಿಲಾದ ಕಾವ್ಯದ ಬಗ್ಗೆ ಎಷ್ಟು ಹೇಳಬೇಕಾಗಬಹುದು? ಆದ್ದರಿಂದ ಲೇಖನದ ಸಂಕ್ಷೇಪಕ್ಕಾಗಿ ಕವಿಗಳ ಕೆಲವೊಂದು ಕಲಾಕೌಶಲವನ್ನು ಮಾತ್ರ ಪ್ರಸ್ತಾಪಿಸುತ್ತೇನೆ.

**"ಯಾಂಚಾ ವಂಧ್ಯಾ ನ ಭವತಿ ಕದಾಪ್ಯಾಹಿತಾ ಸಜ್ಜನೇಷು"**

ಎಂಬ ಮೂಲಕ್ಕೆ ಸುಜನ ಕೈಪಿಡಿದ ತರುಣಿ ಬೇಡಿಕೆಯು ಎಂದು ಬಂಜೆಯಲ್ಲ ಎಂಬ ಅನುವಾದ ಕೇವಲ ಅರ್ಥಾನುವಾಗದೆ, ವಂಧ್ಯಾ ಶಬ್ದದಿಂದ ಹಾಗು 'ಯಾಂಚಾ' ಶಬ್ದದ ಸ್ತ್ರೀಲಿಂಗ ದಿಂದ ಸೂಚಿತವಾದ ಬೇಡಿಕೆಗೆ ಹೆಣ್ಣಿನ ಹೋಲಿಕೆಯನ್ನು ತೆರೆದಿಡುವ ಸುಂದರ ವ್ಯಾಖ್ಯಾನವೂ ಆಗಿದೆ. ಇದರಂತೆ ಕೆಲವೆಡೆ ಮೂಲಕ್ಕೆ ಪೂರಕ ಅಂಶವನ್ನು ಸೇರಿಸಿ ವರ್ಣಿಸುವ ವಿಧಾನವೂ ಇಲ್ಲಿ ಸೊಗಸಾಗಿದೆ. ದ್ವಾರಕೆಯ ಸುತ್ತ ಸಮುದ್ರನು ಬೆಳೆಯುವಂತೆ ಕಾಣುವನೆಂದು ಮೂಲ ವಿಪ್ರಸಂದೇಶದಲ್ಲಿ ವರ್ಣಿಸಿದ್ದನ್ನು ಕಂಡಾಗ, ಯಾರಿಗೆ ಬಳೆಯೆಂದು ಪ್ರಶ್ನೆ ಬಂದರೆ ಅದಕ್ಕೆ ಇಲ್ಲಿ ''ಧರಣಿ ರಮಣಿ ಬಲ ಕಮಲ ಕೈಯ ಬಳೆಯಂತೆ ಹೊಳೆಗಳೊಡೆಯ'' ಎಂದು ಭಾರತಮಾತೆಯ ಬಲಗೈಯಂತಾದ ದ್ವಾರಕೆಗೆ ಬಳೆಯೆಂದು ವರ್ಣಿಸಿದ್ದು ಮನನೀಯವಾಗಿದೆ. ಇದಲ್ಲದೆ ಇಲ್ಲಿ ಕೆಲವೊಮ್ಮೆ ಮೂಲದ ಭಾವವನ್ನು ಮತ್ತಷ್ಟು ಥಳಥಳಿಸುವಂತೆ ಬಣ್ಣಿಸಿದ್ದೂ ಕಾಣಿಸುತ್ತದೆ.

**ರನ್ನ ಹೆಡೆಯ ಬುಸ್ಸವ್ವ ಅಪ್ಪಿರುವ ಮಂದರಾದ್ರಿಯಂತೆ**

ಎಂದು ಶ್ರೀ ಕೃಷ್ಣನ ಟೊಂಕಕ್ಕೆ ಒಡ್ಯಾಣ ಬಿಗಿದ ಸೊಬಗನ್ನು ವರ್ಣಿಸುವಾಗ ಮೂಲದಲ್ಲಿ ರನ್ನ ಹೆಡೆಯ ಎಂಬ ಅಂಶವಿಲ್ಲದೇ ಇದ್ದರೂ ರತ್ನದ ಒಡ್ಯಾಣಕ್ಕೆ ಒಪ್ಪುವಂತೆ ಅದರ ಚಿತ್ರಣ ಅದ್ಭುತವಾಗಿ ತೋರುತ್ತದೆ. ಈ ಕವಿಗಳು ಕನ್ನಡದಲ್ಲಿ ವಿಶೇಷವಾಗಿ ಅಧ್ಯಯನಶೀಲನಾಗಿರದಿದ್ದರೂ ಕನ್ನಡ ಭಾಷೆಯ ಸೊಗಡನ್ನು ಬಳಸಿರುವ ಬಗ್ಗೆ ಆಶ್ಚರ್ಯ ತರುವ ಪರಿಯಲ್ಲಿದೆ. ಹರಿಯ ಉದರಕ್ಕೆ ಹೊಕ್ಕ ಬ್ರಹ್ಮದೇವರು ಅನೇಕ ಬ್ರಹ್ಮಾಂಡಕಂಡಿದ್ದನ್ನು

**''ಕಂಡು ಹಿಂಡು ಬೊಮ್ಮಂಡ ದಂಡು ವಾಗ್ಗಂಡ ಮೂಕಗೊಂಡ''**

ಎಂದು ಬಣ್ಣಿಸಿರುವುದು ಅತ್ಯಂತ ರೋಚಕ ವಾಗ್ವೈಖರಿಯಾಗಿದೆ. ಇದರಂತೆ

**''ಬಯಕೆ ಬೆಸಿಗೆಯ ಬಿಸಿಗೆ ಬೆಂದ ಬಗೆ ಬಿಗಿದ ಬೆಡಗಿ ಬವಣೆ''**

ಎಂದು 'ಬ'ಕಾರದ ಶಬ್ದಗಳನ್ನು ಮಾತ್ರ ಬಳಸಿ ಕವಿತೆಯ ಆವಿಷ್ಕಾರ ಮಾಡುವ ವಿಧಾನ ಆಧುನಿಕ ಕವಿಗಳಿಗೆ ಸವಾಲಾಗಿದೆ. ಇವೆಲ್ಲದುಕ್ಕಿಂತ ಮಿಗಿಲಾಗಿ, ಉತ್ತರ ಸಂದೇಶದಲ್ಲಿ ಕವಿತೆಯ ಪ್ರೌಢಿಮೆ ಮತ್ತಷ್ಟು ಉನ್ನತ ಮಟ್ಟದಲ್ಲಿ ಅಭಿವ್ಯಕ್ತವಾಗಿದೆ.

''ಹುಟ್ಟು ಭಿಡೆಯ ಈ ಪುಟ್ಟ ಹುಡುಗಿನಿನಗೇನ ಅರುಹೆ ಸರಿಯೆ? ಎಂಬುದಾಗಿ ''ಬಾಲ್ಯಂ ಲಜ್ಜಾಸಹಜಲಸಿತಂ ಕಿಂ ತವಾವೇದನೀಯಂ'' ಎಂಬ ಮೂಲವನ್ನು ಕನ್ನಡೀಕರಿಸುವ ರೀತಿಯು ಅಸಾಮಾನ್ಯವೇ ಸರಿ. ಸಂಸ್ಕೃತವನ್ನು ಇಷ್ಟು ಸಮರ್ಥ ರೀತಿಯಲ್ಲಿ ಕನ್ನಡೀಕರಿಸುವುದು ಕನ್ನಡ ಭಾಷೆಯ ಶ್ರೀಮಂತಿಕೆಗೆ ಸಾಕ್ಷಿಯು. ಇಲ್ಲಿ ರುಕ್ಮಿಣಿಯು ಶ್ರೀ ಕೃಷ್ಣನ ಸನಿಹ ತಾ ಅನುಭವಿಸಬೇಕಾಗಿರುವ ಸುಖ ಸನ್ನಿವೇಶದ ಒಂದು ಚಿತ್ರಣವನ್ನು ಕನ್ನಡೀಕರಿಸುವ ವಿಧಾನ ಉಲ್ಲೇಖಿಸಲೇಬೇಕಾದ ರೀತಿಯಲ್ಲಿದೆ.

**ಭ್ರೂ-ಬಿಲ್ಲಿನಲ್ಲಿ ಕುಡಿ-ನೋಟ ಬಾಣ, ಹೂ-ಡುತ್ತ ಸೆಳೆದು ಬಿಟ್ಟು**
**ಮೊಲೆ-ಮಲೆಗಳಲ್ಲಿ ಮ-ನ್ಮಥನ ಖೋಲಿ ಮು-ತ್ತಿಟ್ಟು ಏಟುಕೊಟ್ಟು ll**

ಸಿ-ಟ್ಟಾದ ಹಾಗೆ ಮನ-ಸಿಂದ ಹೊರಗೆ ಕೆಂ-ಪಾಗಿ ಬಂದ ಅವನ
ನೀ ಗೆಲ್ಲು, ಹಲ್ಲು ಶ-ಸ್ತ್ರಕ್ಕೆ ಕೊಲ್ಲು, ಕೆಂ-ದುಟಿಯ ಕಡಿದು, ಜಾಣ ॥

ಹೀಗೆ ಈ ಕನ್ನಡ ವಿಪ್ರಸಂದೇಶವು ಅರ್ಥದ ತೂಕದಲ್ಲಿ ಭಾಷೆಯ ವೇಷದಲ್ಲಿ ರಸದ ಪರಾಕಾಷ್ಠೆ-ಯಲ್ಲಿ ಉತ್ಕೃಷ್ಟ ಕವಿತೆಯೆಂದು ಸಹೃದಯ ಹೃದಯರಾದ ವಾಚಕರ ಅವಗಾಹನೆಗೆ ಸಂಕ್ಷಿಪ್ತವಾಗಿ ಪ್ರಸ್ತಾಪಿಸಿರುತ್ತೇನೆ. ಹೆಚ್ಚಿದ ರಸಸ್ವಾದನೆ ಒಳ ಮುಳುಗಿದವರಿಗೆ ಸಿಗುವುದಷ್ಟೆ.

ಈ ಕನ್ನಡ ಕವಿತೆಯ ಕವಿಗಳು ಮೂಲ ವಿಪ್ರಸಂದೇಶದ ಕವಿಗಳಾದ ಪೂಜ್ಯ ಜಾಲೀಹಾಳಾ ಚಾರ್ಯರ ಪ್ರಿಯ ದೌಹಿತ್ರರು ಹಾಗೂ ಪೂಜ್ಯ ಬಾಳಗಾರು ಶ್ರೀನಿವಾಸಾಚಾರ್ಯ ಸೌ. ಪದ್ಮಾ ವತೀಬಾಯಿ ದಂಪತಿಗಳ ಜ್ಯೇಷ್ಠ ಪುತ್ರರು. ಬಾಣಾಕಾರ ಕ್ಷೇತ್ರವೆಂದೇ ಪುರಾಣ ಪ್ರಸಿದ್ಧವಾದ ಬಾಳಗಾರು ಗ್ರಾಮವು ಇವರ ಪೂರ್ವೀಕರ ಸ್ಥಳವು. ಪೂಜ್ಯ ಸುಬ್ಬಣ್ಣಾಚಾರ್ಯ, ಕಾವೇರಿಬಾಯಿ ದಂಪತಿಗಳ ಪ್ರಿಯ ಪೌತ್ರರಾದ ಇವರು ತಮ್ಮ ತಂದೆಗಳಲ್ಲೇ ಸಮಗ್ರ ವೇದ-ಶಾಸ್ತ್ರ ಅಧ್ಯಯನ ಮಾಡುತ್ತ ಸ್ವಪ್ರತಿಭಾವಿಶೇಷದಿಂದ ಸಂಗೀತ-ಸಾಹಿತ್ಯ-ನ್ಯಾಯ-ವೇದಾಂತ ಮುಂತಾದ ವಿವಿಧ ವಿದ್ಯಾ ಕ್ಷೇತ್ರದಲ್ಲಿ ತಮ್ಮದೇ ಆದ ವಿಶಿಷ್ಟ ಉನ್ನತಿಯನ್ನು ಪಡೆದು ಪ್ರಸಿದ್ಧ ವಿದ್ವಾಂಸರು. ಇವರು ತಮ್ಮ ಹದಿ ವಯೋಮಾನದಲ್ಲಿ ''ಆಚಾರ್ಯಶತಕತ್ರಯಂ'' ''ಶಾಂತಕೌಂತೇಯವ್ಯಾಯೋಗಃ'' ''ಆಚಾರ್ಯ ಲಹರೀ'' ಮುಂತಾದ ಸುಂದರ ಸಂಸ್ಕೃತ ಕಾವ್ಯಗಳನ್ನು ಅರಳಿಸಿ ಸಂಸ್ಕೃತ ಭಾಷೆ ಅದ್ಯಾಪಿ ಜೀವಂತವಾಗಿರುವುದಕ್ಕೆ ಜ್ವಲಂತ ಸಾಕ್ಷಿಯಾಗಿದ್ದಾರೆ. ಸಾಹಿತ್ಯ ಆಸಕ್ತರು ತರ್ಕ-ವೇದಾಂತ ಕೋವಿದರಾಗುವುದು ವಿರಳ. ಇವರಲ್ಲಿ ಅದು ಅಪವಾದವೆಂಬುದು ಅನೇಕ ಸಭೆಗಳಲ್ಲಿ ಇವರ ವಾದ ಮಂಡನೆಯ ರೀತಿಯನ್ನು ಕಂಡವರಿಗೆ ಅನಿಸದೆ ಇರಲಾರದು. ಇದಲ್ಲದೆ ಪೂಜ್ಯ ಜಾಲಿಹಾಳಾಚಾರ್ಯರ ಪ್ರಥಮ ಹಾಗೂ ಪ್ರೌಢವಾದ ಪ್ರಬಂಧವಾದ ''ಶ್ರೀನ್ಯಾಯಾ-ಮೃತಾರ್ಣವ'' ಗ್ರಂಥವನ್ನು ಕೋಟಿಕ್ರಮರೀತಿಯಲ್ಲಿ ಸಂಗ್ರಹಿಸಿರುವ ಮೇಧಾವಿಗಳು. ಇದಲ್ಲದೇ ಅನೇಕ ಪ್ರಕಟಿತ ಅಪ್ರಕಟಿತ ಪ್ರಾಚೀನಗ್ರಂಥಗಳ ಸಂಪಾದಕರು ಹಾಗು ಅನುವಾದಕರು ಮತ್ತು ಶ್ರೀ ಆಚಾರ್ಯ ವಿದ್ಯಾಧಿಷ್ಠಾನದ ನಿರ್ದೇಶಕರು. ಇವೆಲ್ಲಕ್ಕಿಂತ ಮಿಗಿಲಾಗಿ, ಶುದ್ಧ ವೈದಿಕ ಸನಾತನ ಧರ್ಮ ನಿಷ್ಠರಾಗಿ ಅದನ್ನೇ ಸ್ಥಾಪಿಸುವ ಚತುರ ವಾಗ್ಮಿಗಳು. ಇದೆಲ್ಲವೂ ಪೂಜ್ಯ ಅಜ್ಜಂದಿರಾದ ಶ್ರೀ ಜಾಲಿಹಾಳಾಚಾರ್ಯರ ಹಾಗು ವೈನಿ ಅಜ್ಜಿಯವರ ಪರಿಪೂರ್ಣ ಪರಮಾನುಗ್ರಹ ಫಲವೆಂಬುದು ಎಲ್ಲರಿಗೂ ಮನ ಮುಟ್ಟಿದ ಸಂಗತಿಯು. ಇಂಥಾ ಕವಿಗಳು ನನಗೆ ಅಗ್ರಜರಾಗಿದ್ದು ಅವರ ಈ ಕನ್ನಡಕಾವ್ಯಕ್ಕೆ ಪರಿಚಯನುಡಿ ನೀಡುವ ಸಂದರ್ಭ ಒದಗಿದ್ದು ನನ್ನ ಭಾಗ್ಯ. ಪೂಜ್ಯ ಅಜ್ಜ ಅಜ್ಜಿಯ ರಾದ ಜಾಲೀಹಾಳಾಚಾರ್ಯರು ಹಾಗೂ ವೈನೀಯವರಲ್ಲಿ ಮತ್ತು ಪೂಜ್ಯ ತಂದೆತಾಯಿಗಳಲ್ಲಿ ಬೇಡುವಂತೆ ಪೂಜ್ಯ ಅಣ್ಣ ಮತ್ತು ಅತ್ತಿಗೆಯವರಲ್ಲಿ ಪರಮ ಆಶೀರ್ವಾದವನ್ನು ಬೇಡುತ್ತೇನೆ. ಇದ ಲ್ಲದೆ ಈ ಲೇಖನವನ್ನು ಬರೆಯಲು ಅವಕಾಶ ನೀಡಿ ಪ್ರೇರೇಪಿಸಿದ ಸಂಪಾದಕರು ಮತ್ತು ಪ್ರಕಾಶಕ ರಾದ ಪೂಜ್ಯ ಮಾತುಲರಿಗೆ ಪ್ರಣಾಮಗಳನ್ನು ಸಲ್ಲಿಸುತ್ತಾ, ಸಹೃದಯ ಕಾವ್ಯ ರಸಿಕ ಸಮಾಜಕ್ಕೆ ಲೇಖನದ ಗುಣಾಂಶ ಗ್ರಹಣಕ್ಕೆ ಆಶಿಸುತ್ತಾ ಶ್ರೀ ಹರಿವಾಯುಗುರುಗಳಿಗೆ ವಂದಿಸುತ್ತಾ, ವಿರಮಿ-ಸುತ್ತಿದ್ದೇನೆ.

**- ಬಾಳಗಾರು ರೋಚನಾಚಾರ್ಯ**

ತಾ॥ 2-12-2005

ಆಚಾರ್ಯ ವಿದ್ಯಾಧಿಷ್ಠಾನಮ್, ಬೆಂಗಳೂರು

## INTRODUCTION

धर्मार्थकाममोक्षेषु वैचक्षण्यं कलासु च।
करोति कीर्तिं प्रीतिं च साधुकाव्यनिषेवणम्।

When some one is required to share his experiences with others the words are the only medium, thereby the world of words has a significant importance. It is, Vedas which gives the permanent and blissful pleasure with less importance to temporary benefits. All Indians have spread the ocean of knowledge to attain salvation without getting into mundane things. In this fashion the literature has flown in the form of Kavya, Shastra, Purana and Itihasa. The aim of all these literature is the eternal knowledge and eternal truth. Among the various types of literatures, the poetry has a special place and power. With the use of Alankaras and other things it can attract & reach maximum readers.

But the present scenario is something different. We can hardly see any such creation of poetry which can direct us in the right direction. The conviction, that the philosophers have, is absent in the literarians. A reason for this is, since centuries the poetry was written mainly to please the kings, to earn money, to earn fame and many other benefits. The contribution of Kalidasa, Magha, Bana and many others itself is a clear example to this changed attitude. When does this come to an end ? The one and only answer to this is the route adopted and shown by Srimadananda Tirtha Bhagavatpadacharya. His Yamaka Bharata is the best example in itself.

The same tradition can be seen in Sumadhwa vijaya of Narayana Panditacharya, Rukminisha Vijaya of Sri Vadiraja Tirtha and Raghavendra Vijaya etc., Though these kavyas have all the qualities of a Mahakavya form, yet there was a requirement of Sandesha Kavya in this tradition. After prolonged waiting for so many centuries the gap was filled in the 20th century when Panditraj Sri Jalihalal Srinivasacharya

composed "Vipra Sandesha". It is heard that Sri Acharya composed this poetry in Vijaya Samvatsara when he was 39 years of age.

**SANDESHA KAVYA**

The style of Sandesha kavya, is such that the back ground is normally the context of conveying message, an appropriate messenger, the description of the route, the speciality of the place where the recipient is located and the message to be conveyed. Whenever one is required to talk about Sandesha kavya having aforementioned qualities, only Kalidasa's Meghadoota strikes first. As such anybody who wrote Sandesha Kavya have followed the style of Kalidasa. Therefore it is a preconcieved notion that a Sandesha kavya must have Mandakranta metre, which has been used in Meghadoota. Though there are, as many as more than 50 Kavyas composed in Sanskrit literature; present "Vipra Sandesha" inspite of being framed in Mandakranta Chandas, does not come under this category, because it is the only composition framed in a manner not only having the qualities of "sandesha kavya" but also without forgetting the main theme of Veda shastra. And also using Vipralambha Shringara and Sambhoga Shringara, it is very clear that this is different from Meghadoota style. This is wonderful composition having happy ending.

**VIPRA SANDESHA**

As the name itself suggests, it is the message sent by Rukmini through a Brahmin to Sri Krishna. The subject of this work is related with the story of Sri Krishna as described in Dashama Skandha Bhagavatam. "VIPRA SANDESHA" contains three chapters namely, "Purva sandesha", "Madhya sandesha" and finally "Uttarasandesha".

**MANGALACHARANA**

Purva Sandesha begins with Mangalacharana. The poet being a staunch devotee of Hayagreeva prays this incarnation of the Lord. It is a well known fact that the sage "Vadiraja Tirtha" was a profound devotee of

Hayagreeva. Praising this incarnation, the poet is indicating that he is a follower of Vadiraja Tirtha who has the highest status in the world of poetry.

The Acharya's devotion towards Lord Hayagreeva can be vividly seen in 57th stanza of Madhya sandesha where after explaining the Dashavatara he again says that this Hayagreeva Rupa is shining in his heart always and at no time he can forget it. And again in Uttara Sandesha the same Mangalacharana shloka is repeated in the end.

## PURVA SANDESHA

Purva Sandesha has 63 stanzas. Here the poet explains Bhishmaka the king of Vidarbha, Kundinapura, his daughter Rukmini, her adoloscent and charming beauty. Even here, there is a villain Rukmi who hates Krishna and wants to get his sister married to Shishupala to avoid her marriage with Krishna. Rukmini with full of love only for Krishna detects the plot and finds a brahmin of the highest calibre to send her message. She explains the route to reach Dwaraka, after crossing the river Tapi, Vindhya , the river Reva and the river Yamuna. While describing all these we can find that the talent of the poet is second to none. His capacity gets substantiated when he challenges Kalidasa while describing Vipra as a messenger of Rukmini.

कश्चिन्मेघं हृदयदयितावेदनाय न्ययोजीत्
काचित्स्वोक्तैकवचनचणं पक्षिणं बुद्धिशून्यम् ॥
विप्रं तावत् प्रकृतिकुशलं कामिनीयं ययाचे
कामाक्रान्ता अपि न दधते दीनतामुत्तमा हि ॥

One man pleaded a cloud, which is lifeless, to communicate his love. Another lady begged a thoughtless bird which is expert only in reciting. Whereas Rukmini prayed a naturally intelligent Brahmin, to communicate her love to Krishna. Noble people do not resort to pitiable actions though pervaded with lust.

In the Megha sandesha , poet Kalidasa told that Yaksha tried to send his love message through cloud. How can a lifeless thing like cloud be requested as a messenger, is being defended by the poet that the begging to everything, without differentiating between living and non living, is the nature of all lustful persons. But in the case of Rukmini this rule went wrong; therefore Kalidasa's thinking is incorrect, is being shown by the poet.In Hamsa sandesha princess Damayanthi requested a swan to be a messenger, which is expert only in reciting. Though this is better than a cloud, it is foolishness to select this as a messenger since it is a thoughtless creature and cannot talk according to the circumstances.

While explaining the association of Shiva-Parvati the imagination of the poet is wonderful.

हृद्यस्वच्छस्तबककुचयोर्बिम्बितां पञ्चवक्त्रीं
दृष्ट्वा देवी दशमुखसमायातमाशङ्कमाना ॥
कैलासाद्रिप्रचलनभिया गाढमाश्लिष्य भेजे
यं बाहुभ्यां हिमगिरिसुतास्वप्रतीके विभूतिम्

Once Parvathi, on looking at the reflection of five faces of Shiva on each of her glittering breasts, which were charming like a cluster of flowers, thought as though 10 faced Ravana himself has come. Out of fear of leaving Kailasa (because once Ravana separated Parvathi from Shiva by taking Athmalinga) she soon hugged Shiva and the sacred ash got smeared on her body (Bear such Chandrashekhara in your heart).

SHIVA is also called as ARDHANARISHWARA because he is always tightly hugged by Parvathi. The poet fancies the reason for this hugging as above.

This work being a "Vipralambha Sringara kavya" must show the explanation of the effect of seperation. Therefore the poet has described the point of seperation of Gopikas in various verses. Among them this particular one is an excellent example.

मुक्ताहारो विसृजति तनौ पाण्डिमानं स्तनाग्रात्
सङ्गृह्णात्युच्छ्वसनमरुता ताडितः कालिमानम् ।।
एतन्मार्ष्टुं नयनयुगलाद्वारिधारा प्रवृत्ता
पश्येर्गोपीष्वनिशकलिता विप्रयोगस्य लीलाः ।।

Oh Brahmin! The pearl garland looks very dull on the bosom of the weeping Gopikas. It looks as though the pearls have given away all its whiteness to their body, and being hit by the heated respiration they (pearls) are taking away the blackness from the nipples. To wash this blackness, the tears are rolling down from both the eyes. Thus you will see the way in which the separation, from Lord Krishna, teases and plays with Gopikas.

Alongwith the description with the help of Vipralambha Shringara, the poet adds flavour with the sense of humour,does not go unnoticed. This can be observed in the 60th verse when the poet says, through Rukmini, that on the way to Dwaraka the Brahmin being a scholar must not forget the message by getting involved in the spiritual discussions with the other scholars.

## MADHYA SANDESHA

This chapter consists of 62 verses and gives us a glimpse of the portrait of Dwaraka, a city which is golden coloured having stable of elephants and horses, and gymnasium. The city has the inseparable Agrahara, a dedicated place for brahmins. The explanation of palace and the court is marvellous. As a trail of Sringara kavya the romantic description can also be seen gracefully. Krishna, being the Hero of this kavya, all through Madhya Sandesha we can see the character sketch of the Lord. While talking about the hero, the poet with the wonderful command over the language, uses all the seven cases (Vibhakti) in one stanza and leaves the readers spell bound.

यस्य प्रीतिर्मयिसहभवा यो नरीनर्ति चित्ते
सन्देशोक्तिर्यमधिकुरुते येन मे जीविताशा ।।

यस्मै दास्ये रतिसुखमहं नो परः कोपि यस्मात्
यस्मिन् विश्वं विलसतितरामीक्षसे तं सभायाम् ॥

Who always dances in my heart; to whom my message is addressed; by whom I have a wish to live; for whom I will be giving myself; nobody is greater than whom; whose love is my by-birth virtue; where the entire universe shines; you will see that person in that court.

The picturisation of Lord, from bottom to top in 15 verses is an example of the deep knowledge of Sri Jalihalu Acharya. While reading one can get a real picture of Lord himself. Unless somebody has not felt it in his heart such an explanation is not possible. This is the way, one has to daily meditate Lord. Next is the description of Dashavatara. After the explanation of this, one by one, in a nutshell the poet concludes all the 10 incarnations in one verse itself. In this context, without the mention of the description of Narasimha, it is very difficult to write further.

गर्भस्रावं कलयदसुरस्त्रीषु सङ्गर्जनेन
ब्रह्मन्नेषोऽकलयत हरिर्विग्रहं नारसिंहम् ॥
प्रह्लादेनोपमितमणयः सन्ति सन्तः कियन्तः
वेत्तुं तत्त्वं कनककशिपोः यो व्यदारीत्पिचण्डम् ॥

The lord had the incarnation as Narasimha, who aborted the wives of demons with his loud roar. He lacerated the stomach of Hiranyakashyapu as if to find the fact that how many diamond-like good souls like Prahlada may be there inside.

It concludes with Rukmini making a request to the brahmin that he should find the opportune time to hand over the letter. This particular thing what the poet has made a mention provides guidance to all of us as to how we should transact with others.

## UTTARA SANDESHA

The letter of Rukmini is transcribed in this last chapter. It has 58

verses. She explains her feelings in detail, how she has come to know about the qualities of the Lord, how merciful he is, how the lord must rescue her from the clutches of Rukmi. The Vipralambha Sringara can be understood very well in this Sandesha. An example to this can be seen in the verse.

हर्म्ये कृष्णो दिशि दिशि पुरः पृष्टतश्चापि कृष्णः
तल्पे कृष्णः पथि पथि मनोमन्दिरे कृष्णकृष्णः ॥
सर्वः कृष्णो भवति नितरां चिन्तनाज्जुष्टकृष्णात्
नाहं कृष्णाऽभवमपि परं पाण्डुरास्मीति चित्रम् ॥

Krishna is seen in balcony. Krishna is seen in all directions. Krishna is also seen in front and behind. Krishna is seen even in the bed. Krishna is seen in all the paths. Krishna, and only Krishna, is in my mind which is a temple. Everything has become Krishna because of the immersion in the thoughts about Krishna. But it is quite surprising that I have not become Krishna (dark). On the contrary I have become blanch.

The poet is able to convey that it is not for Rukmini alone to feel the presence of the Lord everywhere. It is a must for any devotee who wishes to see the Lord. One more interesting thing about this chapter is the way in which the prolific poet has established the supremacy of Lord Krishna on the others as a whole. This point becomes explicitly clear when Rukmini rejects all others and chooses only Lord as her groom. In this context the rejection Shesha by Rukmini we can make out how clever the poet is.

नागाधीशः सततवसुधाभारखेदार्तमूर्धा
भक्ष्यः किश्चाम्बरचरपतेः वायुना जीवितव्यः ॥
नित्यं वक्त्रोद्दलितगरलो रक्तनेत्रो द्विजिह्वः
सीमन्तिन्या परिगद कया वाञ्छया सेवितव्यः ॥३१॥

Now Rukmini begins to explain why she cannot accept persons other than Krishna as her bridegroom. The king of serpents Shesha

is having heavily tired head due to the bearing of the earth all the time. He himself is the food for Garuda, the king of all eagles; He is living only by consuming air alone; He always vomits venom: he is bloody eyed and two tongued; Oh! Krishna, please tell me for what desire a woman can accept such a person?

Rukmini requests Lord Krishna that he should take her away when she goes for worshipping Goddess Girija and give her immense blissful hapiness and pleasure. Accordingly Krishna takes her away, marries her and enjoys with here though he is self contentend since time immemorial. Finally the poet introduces himself and has dedicated this work to Lord Krishna. This only a brief summary of this work.

The poetry has the capacity of getting read easily and it is true to the fact that बालसङ्घमपि ... पण्डितैः ।

When Sri Ruciracharya Balagaru asked me to participate in the translation of this poetry to english, I had no hope of doing it as it was an extremely tough assignment. But once started, I never felt the strain, on contrary enjoyed it thoroughly. My sincere namaskaras to Sri Ruchiracharya. He used to postpone his dinner, avoid all his personal work and used to spend time on this for hours. It is my fervent appeal that I get many more chances like this.

Chief Editor Sri Gopalakrishnacharya son of Panditraja Jalihalu Srinivasacharya has given me a chance to serve for a noble cause. I must owe a debt of Gratitude to him. Whatever little I have done in all humility I shall submit it to my teachers Sri Ruchiracharya and Sri Balagaru acharya.

If I am blessed I feel I am done.

***Kashi Ramesh***

2-12-2005

## ABOUT THE AUTHOR

Sri Panditaraja Jalihala Sreenivasacharya, the author of this SANDESHA KAVYA, was a great scholar, being authority in all SHASTHRAS, lived in the twentieth century. He was born in the year 1915, ANANDA Samvatsara to the couple, Shri Sathvika Hunugundha Gururaja Acharya and Smt. Yamuna Bai, of 'PYTANA' family in the village called Jalihala. The PYTANA family is known for its descendants being the famous TIPPANYACHARYAS. It is told that the poet was named as Srinivasa Acharya since the couple got him as their son by the sacred boon of Lord Srinivasa of Thirupathy. His father Shri Gururaja Acharya's name was prefixed with 'SATVIKA' by the people who have known him, for his SATVIKA qualities like Vyragya, Bhakti etc. He was a great scholar in Vedantha and Vyakarana.

At home Srinivasacharya studied under his father in Sanskrit literature and grammar. He had poetic skills by birth itself. While he was going to the Kannada primary school, at the very young age, he composed a Kannada champu kavya called 'PARVATI PARINAYA CHAMPU'. Apart from his ascetic-like father's blessings, also the blessings of many Mahatmas like Shree VadirajaTheertha, Shree Raghavendra Theertha etc., was always towards him. It is told that, when he was a boy, he had an opportunity to meet the great sage Sri Vishnu Thirtha (Adavi Swamygalu) while he was going alone at Madanur and he chose knowledge instead of wealth, which were offered as boon to him by Sri Vishnuthirtha.

Once His Holyness Shree Sathyadhyana Thirtha ,the Pontiff of Uttaradimutt, who was known for his all pervasive scholarship especially on Madhwa Siddantha and for spreading it all over India, when visited Jalihala, happened to meet the young boy Shreenivasa.. Identifying the boy's genius he chose the boy as his own disciple and took him to the Mutt. There he pursued the studies in Nyaya, Mimamsa and Vedanta.

He studied Nyaya under the most eminent Pundits in the Mutt, Sri Pandurangi Krishnacharya and Sri Varakhedi Narasimhacharya. It was told that, while he was a student himself, he was giving firm answers to the grueling Pundits, to their great astonishment. He studied Vedanta beginning from Pramana Paddathi ending with the Nyayasudha and Vyasa Thraya under His Holiness Sri Sathyadhyana Theertha himself. It is told that, by seeing Sri Srinivasa Acharya's capability, earnestness and dedication in defying the arguments from the scholars of other schools of Vedantha like Advaitha etc., considering him as capable of defending Madhva Siddantha in future, His Holiness taught him only, with special interest, the great work Dwaitha Dyumani, which is very difficult to be understood even by the great scholars. Therefore Shri Srinivasacharya is considered as a special disciple of His Holyness. In between, he went to Banaras and studied the advanced portions of Nyaya, Mimansa and Vyakarana. At that time he also learnt Hindustani vocal music. Apart from these, by his spontaneous talent, he has earned knowledge in Astrology and other scriptures. Apart from the Sanskrit language, he was also proficient in Kannada (both Halegannada & Hosagannada), Marathi, Hindi, Urdu and Pali Languages. Because of the enormous knowledge that he was possessing, many honorary titles, like Nyaya Chudamani, Nyaya Kovida Panditaraja etc, came in search of him.

After the completion of studies, Sri Acharya began to teach to several disciples, who were attracted by his proficiency in all subjects and the way of teaching. After coming to him, the disciples, did never got to worry about going to others for higher studies. They were maintained by him without any returns and this practice of 'Gurukula' went on in an unbroken continuity till his end. Being a Brahmin one should lead his life like this only, was his principle.

Apart from parting his knowledge with his own disciples, who devoted their entire life this knowledge, spread the Madhva philosophy through his discourses, among common people also. He was

ಅನಂತರ ಆ ವಿಪ್ರನು ರುಕ್ಮಿಣಿಯ ಆ ಮಾತನ್ನು ಆದೇಶದಂತೆ ಶಿರಸಾ ವಹಿಸಿದನು. ಬೇಗನೇ ದ್ವಾರಕೆಗೆ ಪ್ರಯಾಣಿಸಿದನು. ಶ್ರೀ ಕೃಷ್ಣನನ್ನು ಕಂಡು, ಹೃದಯದಲ್ಲಿ ಖುಷಿಗೊಂಡು, ಅವನಿಗೆ ಪತ್ರವನ್ನು ನೀಡುತ್ತ, ಕಪಿಕುಲ ಅಗ್ರಣಿ ಹನುಮಂತನು ಸೀತೆಯ ಸಂದೇಶವನ್ನು ಶ್ರೀ ರಾಮನಿಗೆ ಅರುಹಿದಂತೆ, ಆ ದ್ವಿಜಕುಲ ಅಗ್ರಣಿಯು ರುಕ್ಮಿಣೀ ಸಂದೇಶವನ್ನು ಶ್ರೀ ಕೃಷ್ಣನಿಗೆ ಸಾದರವಾಗಿ ವರ್ಣಿಸಿದನು.

Then that great brahmin carrying the order of Rukmini on his head, quickly reaching Dwaraka, on seeing Krishna having happiness full of his mind and on giving him the letter, described the lovely message of Rukmini to Sri Krishna, like Hanuman delivered message of sita to Sri Rama.

**श्रुत्वा विप्रोदितरसगिरः पत्रिकार्थं विदित्वा**
**रक्षांसीवारुणकुलमणिश्चेदिपादीन्यपास्य ॥**
**भैष्मीं सीतामिव च कलयन् पाणिपद्मेन चञ्च-**
**द्रोमाञ्चालिः स इव च तया नित्यतृप्तो विरेजे** ॥५७॥

**श्रुत्वेति** । विप्रेण उदिताः रसाः रसविशिष्टाः गिरः वाचः श्रुत्वा । पत्रिकाया अर्थं विदित्वा । अरुणकुलमणिः सूर्यकुलमणिः रामः रक्षांसि इव रावणादिराक्षसानिव । सः कृष्णः। चेदिपः शिशुपालः आदिः येषां तान् । न्यपास्य निगृह्य । सीतां इव भैष्मीं पाणिपद्मेन कलयन् गृह्णन् । चञ्चती उत्पद्यमाना रोमाञ्चानां आलिः समूहः यस्मात् तादृशः सन् । तया रुक्मिण्या सह । नित्यतृप्तः सन् विरेजे । वि उपसर्गपूर्वकात् राजृदीप्तौ लिट् । अत्र उपमा ।

ಶ್ರೀ ಕೃಷ್ಣಪರಮಾತ್ಮನು, ಆ ಬ್ರಾಹ್ಮಣನ ರಸವತ್ತಾದ ಮಾತುಗಳನ್ನು ಕೇಳುತ್ತಲೇ ಆ ಪತ್ರಿಕೆಯ ಭಾವವನ್ನೆಲ್ಲ ತಿಳಿದವನಾಗಿ, ಹಿಂದೆ ಶ್ರೀ ರಾಮನು ರಾವಣಾದಿ ರಾಕ್ಷಸರನ್ನು ಸದೆಬಡಿದಂತೆ ಈ ಶಿಶುಪಾಲಾದಿಗಳನ್ನು ನಿಗ್ರಹಿಸಿ, ಸೀತೆಯಂತೆ ರುಕ್ಮಿಣಿಯನ್ನು ಕರಕಮಲದಿಂದ ಹಿಡಿಯುತ್ತ ಅವಳ ಮೈ ರೋಮಾಂಚಗೊಳಿಸುತ್ತ ನಿತ್ಯತೃಪ್ತನಾಗಿದ್ದರೂ ಅವಳೊಡನೆ ವಿಹರಿಸುತ್ತ ವಿರಾಜಿಸಿದನು.

After hearing the beautiful speech of the Brahmin and knowing the feelings of the letter, like Rama delighted Sita by holding her hand after killing demons, similarly Sri Krishna after smashing Shishupala and others, holding Rukmini by his lotus

hands and giving thrills to her, enjoyed with Rukmini even though he is always self contented since time immemorial.

वैराग्याद्यैर्भुवनविदितात्सात्विकोपाभिधानात्
गुर्वाचार्यादधिगतजनूः वेदशास्त्रप्रवीणात् ॥
सत्यध्यानाभिधयतिमणेर्लब्धविद्याप्रपञ्चः
काव्यं विष्णोरकलयदिदं प्रीतये श्रीनिवासः ॥५८॥

इदानीं कविः स्वपरिचयं कुर्वन् काव्यरत्नं भगवत्प्रीतिमात्रमुख्यफलकमिति निरूपयति । **वैराग्याद्यैरिति** । वैराग्यं आद्यं येषां तैः । गुणैरिति शेषः । भुवने विदितात् प्रसिद्धात् । प्रसिद्धिप्रकारश्च स्पष्ट इत्याह । **सात्विकेति** । सात्विक इति उपाभिधा उपनाम यस्य तस्मात् । निजनामाह । **गुर्वाचार्यादिति** । गुरुराजाचार्यात् । अधिगतं जनुः येन तादृशः । वेदशास्त्रप्रवीणात् । सत्यध्यान इति अभिधा यस्य तस्मात् यतीनां मणेः । लब्धः विद्याया प्रपञ्चः यस्य सः । श्रीनिवासः तन्नामा **अयं कविः** । विष्णोः प्रीतये इदं काव्यं अकलयत् कृतवान् ।

यत्करोषि यदश्नासि यज्जुहोसि ददासि यत्
यत्तपस्यसि कौन्तेय तत्कुरुष्व मदर्पणम् ॥

इति प्रमाणानुगुणोपसंहारात् अशेषमतिमङ्गलमिति ।

ವೈರಾಗ್ಯಾದಿ ಗುಣಗಳಿಂದ ಸಾತ್ವಿಕಾಚಾರ್ಯರೆಂದು ಲೋಕವಿಖ್ಯಾತರಾದ ಶ್ರೀ ಗುರುರಾಜಾಚಾರ್ಯರಿಂದ ಜನ್ಮ ಪಡೆದು, ವೇದಶಾಸ್ತ್ರವಿಶಾರದರಾದ ಶ್ರೀಮತ್ ಸತ್ಯಧ್ಯಾನತೀರ್ಥರೆಂಬ ಯತಿಸಾರ್ವಭೌಮರಿಂದ ಸಕಲವಿದ್ಯೆಗಳನ್ನು ಗಳಿಸಿದ ಜಾಲಿಹಾಳ ಶ್ರೀನಿವಾಸಾಚಾರ್ಯರು ಶ್ರೀ ವಿಷ್ಣು ಪ್ರೀತಿಗಾಗಿ ಈ ಕಾವ್ಯವನ್ನು ರಚಿಸಿದ್ದಾರೆ.

The poet Srinivasacharya was born to Gururajacharya ,who is also well known as Sattvikacharya by his qualities like Vairagya etc., The poet had his complete education with the sage HH Satyadhyana Teertha who was the expert in Veda Shastra. He wrote this poetry only to please Sri Vishnu. Harae namaha.

शाङ्गं मुद्रां जपमणिसरं पुस्तकं पाणिपद्मैः
बिभ्राणाब्जोद्भवमभिमुखं साङ्गवेदान् ब्रुवाणा ॥
पीयूषांशोरिव विदधती तापशान्तिं जगत्यां
हायग्रीवी परिलसतु मे मानसे हृद्यमूर्तिः ॥ * ॥

एवं समापितविप्रसन्देशाख्यखण्डकाव्यमणिः कविशिरोमणिः श्रीजालिहाळ श्रीनिवासाचार्यः प्रबन्धान्त्येऽपि स्वोपास्याश्वास्यप्रार्थनपुरस्सरमुपसंहरति । **शाङ्गमिति** । प्रथममङ्गलश्लोक एव अत्रापि निबद्ध इति पूर्वोक्तव्याख्यात्राप्यनुसन्धेयेति ॥

विप्रसन्देशकाव्यस्य व्याख्या भावप्रकाशिका ।
पित्रोः प्रसादतः पूर्णा कृष्णसम्प्रीतये भवेत् ॥

मातामह महाप्राज्ञ जालिहाळगुरूत्तम ।
दौहित्रकलवाक्येन सम्प्रीतो भव सर्वदा ॥

यथामति कृता व्याख्या सतां प्रीतिकरी भवेत् ।
दोषा मदीयाः, निर्दोषं केवलं गुरुवैभवम् ॥

कृष्णाय वासुदेवाय देवकीनन्दनाय च ।
नन्दगोपकुमाराय रुक्मिणीशाय ते नमः ॥

लसद्विजयदासार्याराधनोत्सवसद्दिने ।
पार्थिवे पूरिता व्याख्या प्रीणयेत् पार्थसारथिम् ॥

इति
बाळगारु श्रीनिवासाचार्यतनुजेन रुचिराचार्येण
विरचिता विप्रसन्देशव्याख्या
भावप्रकाशिका सम्पूर्णा ।

॥ श्री कृष्णार्पणमस्तु ॥

ಶಂಖ–ಜ್ಞಾನಮುದ್ರೆ–ಜಪಮಾಲೆ–ಪುಸ್ತಕಗಳನ್ನು ಕರಕಮಲಗಳಿಂದ ಧರಿಸುತ್ತ, ಬ್ರಹ್ಮದೇವರಿಗೆ ಎದುರಾಗಿ ಸಾಂಗವಾಗಿ ವೇದಗಳನ್ನು ಉಪದೇಶಿಸುತ್ತಿರುವ, ಅಮೃತಕಿರಣಚಂದಿರನಂತೆ ಜಗದ ಪರಿತಾಪಕ್ಕೆ ಶಾಂತಿ ನೀಡುವ ಶ್ರೀ ಹಯಗ್ರೀವದೇವರ ಸುಂದರಮೂರ್ತಿಯು ನನ್ನ ಹೃದಯದಲ್ಲಿ ಹೊಳೆಯುತ್ತಿರಲಿ.

My Lord Hayagreeva, holding Shankha(couch), Mudra (symbol of knowledge), garland of japa beeds and sacred book in four lotus hands, is teaching Vedas to Brahma. Such fascinating figure of Lord, shall always shine in my heart, who provides solace to the miseries of the entire world, the manner in which the moonlight relieves summer heat.

श्रीमध्वान्तर्गतश्रीकृष्णार्पणमस्तु

इति उत्तरसन्देशः



# ಕನ್ನಡ ವಿಪ್ರಸಂದೇಶ

ರಚನೆ :

ಬಾಳಗಾರು ರುಚಿರಾಚಾರ್ಯ

ಶ್ರೀಗುರುರಾಜೋ ವಿಜಯತೇ

# ಕನ್ನಡ ವಿಪ್ರಸಂದೇಶ

## ಪೀಠಿಕೆ

**ಅನಾದಿ-ನಿತ್ಯ ಕಾಮ**

'ಸುಖವು ಉಕ್ಕಿ ಪರ-ಬೊಮ್ಮ ಹೃದಯದಲಿ ತೆರೆದುಕೊಂಡ ಇಚ್ಛೆ
ಹಿಂದು ಮುಂದು ಎಂ-ದೆಂದು ಇದ್ದು ವಿಧ-ವಿಧದಿ ರೂಪ ಬಿಚ್ಚೆ॥
ರೂಪ ರೂಪ; ಪ್ರತಿ-ರೂಪವಾಗಿ ಅನು-ರೂಪ ಜಗದ ಉದಯ
'ವ್ಯರ್ಥನೇಮ ಪುರು-ಷಾರ್ಥಧಾಮ' ಪರ-ಮಾತ್ಮ ಕಾಮ ಸದಯ ॥೧॥

ಹಣವ ಎಣಿಸಿ, ಮ-ತ್ತೆಣಿಸುವಾಗ, ಉ-ತ್ಸಾಹ ಸೊರಗದಂತೆ
ಹರಿಯ ಗುಣದ ಗಣ ಎಣಿಸುವಾಸೆ 'ಸಿರಿ-ದೇವಿಕಾಮ'ವಂತೆ ॥
ಎಷ್ಟು ಎಣಿಸಿದರು, ಆಸೆ ಬಿಡದು, ಅದು ಜನಿಸಿ ಬಂದುದಲ್ಲ
ಕ್ಷರಣವಿರದ ಅ-ಕ್ಷರದ ಪ್ರಕೃತಿ ಕಾ-ಮಕ್ಕೆ ಕ್ಷರಣವಿಲ್ಲ ॥೨॥

**ಅನಂತ - ಕಾಮ**

ಕಾಮಿ ಹರಿಯು, ಕಾ-ಮಿನಿಯು ಸಿರಿಯು, ಜಗ-ವೆಲ್ಲ ಕಾಮದಡಿಯು
ಮುಕ್ತ ಜನರು, ಈ ಬ್ರಹ್ಮ ರುದ್ರ ಸುರ-ರೆಲ್ಲ ಕಾಮಸೆರೆಯು ॥
ತಾಪಸರಿಗು, ಗುರು-ಹಿರಿಯ ಜನರಿಗೂ ಕಾಮ ಬಿಡದ ಮೇಲೆ
ನಲಿವ ರಾಜರಿಗೆ, ಅವನ ಪ್ರಜೆಗೆ ತ-ಪ್ಪುವುದೆ ? ಕಾಮಲೀಲೆ ॥೩॥

ಕಾಮ, ಎಲ್ಲ ಚೇ-ತನರ ಮೂಲ, ಅದು-ಕೊರತೆ ಸಹಿಸೊದಿಲ್ಲ
ಸೇರಬೇಕಿರುವ ಅವರ ವಸ್ತು ಅವ-ರೀಗೆ ತರಲು ಬಲ್ಲ॥
ಬಣ್ಣವಿಲ್ಲ, ಅದು ಸಣ್ಣಗಿಲ್ಲ, ಬಂ-ದಿದ್ದೆ ತಳಿಯೊದಿಲ್ಲ
ತಿಳಿದರೂನು ಕುಂ-ದೋದೆ ಇಲ್ಲ, ಮೈ ಮರೆಸಿ ಮೆರೆವುದಲ್ಲ! ॥೪॥

**ತರ-ತಮದ ಕಾಮ**

ಏನು ಬಯಸದಲೆ ಮಾಡ ಬಯಸುವಾ ಹರಿಯು ಆಪ್ತಕಾಮ
ಸವಿದ ರಸದ ಸವಿ-ಯನ್ನೆ ಬಯಸುವಾ ಸಿರಿಯು ನಿತ್ಯಕಾಮ ॥
ಸಿಗುವುದನ್ನೇ ಸುಖ-ದಿಂದ ಬಯಸುವಾ ಮುಕುತ ಸತ್ಯಕಾಮ
ವಿಷಯ ಬಯಸದಲೆ ಭಕುತಿ ಬಯಸುವಾ ಭಕುತ ತೃಪ್ತಕಾಮ ॥೫॥

ವಿಷಯ ಬಯಸಿ ಹರಿ-ಭಕುತಿ ಬಯಸುವಾ ನರನು ವ್ಯಕ್ತಿಕಾಮ
ಹರಿಯ ಮರೆತು ಸುಖ-ವನ್ನು ಬಯಸುವಾ ಜೀವಿ ಕ್ಷುದ್ರಕಾಮ ॥
ಹರಿಯ ಜರಿದು ಸುಖ-ವನ್ನು ಬಯಸುವಾ ಜಂತು ದುಷ್ಟಕಾಮ
ಸುಖವ ತೊರೆದು ಹರಿ-ಯನ್ನು ಬಯಸುವಾ ಋಜುವೆ ಶ್ರೇಷ್ಠಕಾಮ ॥೬॥

**ತ್ರಿವಿಧ - ಕಾಮ; ವಿವಿಧ - ಕಾಮ**

ಧರ್ಮ ಅರ್ಥಗಳು ಸೇರಿದಾಗ, ಈ ಕಾಮ ಸಕಲ ಪರಮ
ಒಂದು ಮಾತ್ರ ಸೇ-ರಿದರೆ ಮಧ್ಯಮವೊ, ಎರಡು ಬಿಡಲು ಅಧಮ ॥
ಕಾಮ, ಪ್ರೇಮ ಸಂ-ಕಲ್ಪ ಬಯಕೆ ವಾ-ತ್ಸಲ್ಯ ಸ್ನೇಹ ಮೋಹ
ಭಕ್ತಿ ದೀಕ್ಷೆ ಮುಂ-ತಾದ ರೂಪದಲಿ ಬೆಳೆವುದಂತೆ ಗೂಹ ॥೭॥

ಕಾಮ ರತಿಯು, ಸು-ಪ್ರೇಮ ವಿರಹ, ಸಂಕಲ್ಪ ದೂರದೃಷ್ಟಿ
ಬಯಕೆ ಸೃಷ್ಟಿ ವಾ-ತ್ಸಲ್ಯ ಪುಷ್ಟಿ, ಆ ಸ್ನೇಹ ರಕ್ಷಣೇಷ್ಟಿ॥
ಮೋಹ ಸ್ವಾರ್ಥ, ನಿ-ಸ್ವಾರ್ಥ ಭಕುತಿ, ನಂ-ಬಿಕೆಯು ದೀಕ್ಷೆ ಎಂದು
ಕಾಮದಂಪತಿಯ ವಿವಿಧ ಮೂರುತಿಯ ಕೂಸು ತೃಪ್ತಿಯೊಂದು ॥೮॥

**ಸುಟ್ಟ - ಕಾಮ**

ಇಹದ ಪರದ ಕ-ಣ್ಣಲ್ಲಿ ಬೆಳೆದ ಕಾ-ಮನ್ನ ಮೋಕ್ಷವೆಂಬ
ಕಣ್ಣಿಗಾಹುತಿಯ ಕೊಟ್ಟು ವಿಷಯರತಿ-ಯನ್ನು ಅಳಿಸಿ ತುಂಬ ॥
ಮನಸು ಬುದ್ಧಿಗಳ ಮಿಲನದಿಂದ ಶು-ದ್ಧಾಗಿ ಅಗ್ನಿಯಿಂದ
ಬಂದ ಪುಣ್ಯಸೇ-ನಾನಿಯಿಂದ ತಾ-ಮಸರ ದಾಹ ಛಂದ ॥೯॥

ರತಿಯನಗಲಿಸಿದ-ರೆಂದು ಅತ್ತರೇ, ಸತಿಯ ಗತಿಯು ಏನು?
ಸತಿಯ ಸುಟ್ಟ ಆ ದಕ್ಷಕಾಮನಾ ಸುಡದೆ ಬಿಡುವರೇನು?
'ಮಾಡಿದುಣ್ಣೊ ಮಾ-ರಾಯ' ಎಂಬ ನಾಣ್ನುಡಿಯು ನಡೆಯದೇನು?
ಆ ದಿಗಂಬರ ಅ-ನಂಗನೇ ರತಿಗೆ ಇಷ್ಟತಾನೆ ? ಇಷ್ಟೂ ! ॥೧೦॥

**ಕಾಮ - ವರ್ಣಾಶ್ರಮ**

ಬ್ರಹ್ಮಚಾರಿ ಬೈ-ರಾಗಿಕುವರ, ಶೃಂ-ಗಾರಿ ಕೂಸು ಗೇಹಿ,
ವನಿಯು ಇವನೆ ವನ-ವಾಸಿ ಅನುಜ, ಯತಿ ಯಕ್ಷಮತಿಯ ದೇಹಿ ॥
ಮೋಕ್ಷ ಧರ್ಮಗಳ ಅರ್ಥಕಾಮಗಳ ದೃಷ್ಟಿ ನೆಟ್ಟ ಕಾಮ
ವಿಪ್ರ, ಕ್ಷತ್ರಿಯನು, ವೈಶ್ಯ, ಶೂದ್ರ, ವರ್ಣಾಶ್ರಮಕ್ಕೆ ಧಾಮ ॥೧೧॥

**ಕಾಯಾ-ವಾಚಾ-ಮನಸಾ ; ಕಾಮ**

ಭಿನ್ನದೇಹದಲಿ ಅನ್ಯಜೀವ ಮೈ-ತಾಳಿ ಬರುವನಂತೆ
ಭಿನ್ನಮಾತಿನಲಿ ಅನ್ಯಭಾವ ಹೊರ-ಹೊಮ್ಮಿ ಬಂದಿತಂತೆ ॥
ಭಿನ್ನ ಚಿಂತೆಯಲಿ ಅನ್ಯದೇವ ಹೊಳಿ-ತಂತೆ ಸೂತ್ರದಲ್ಲಿ
ಕಾಮಿಕಾವಿನಲಿ ಕವಿಯ ನವ್ಯದಲಿ ಭಕುತಿ ಬೆಳಕಿನಲ್ಲಿ ॥೧೨॥

ಕಾಮಕಂಪದಲಿ ಪ್ರೇಮಭಾರದಲಿ ಉರುಳಿತಂತೆ ಕಾಯ
ಭಾವತಂಪಿನಲಿ ಛಂದಚಂದ್ರನಲಿ ಅರಳಿತಂತೆ ಕಾವ್ಯ ॥

ಭಕ್ತಿ ಶಕ್ತಿಯಲಿ ವಿರತಿ ವೀರ್ಯದಲಿ ಹೃದಯ ತೆರೆಯಿತಂತೆ
ರಸವ ತಂತು, ಉ-ಕ್ಕಿಸಿತು, ಸೇರಿಸಿತು, ವಿವಿಧ ಆತ್ಮಗಂತೆ ||೧೩||

ಕಾಮಿ ನುಗ್ಗುವನು, ಪ್ರೇಮಿ ಕುಗ್ಗುವನು, ಮೋಹದಲ್ಲಿ ಸಿಕ್ಕು
ಕವಿಯು ಜೀಗುವನು, ನುಡಿಗೆ ಮಾಗುವನು, ಊಹೆಯಲ್ಲಿ ಹೊಕ್ಕು ||
ಭಕ್ತ ಬಗ್ಗುವನು, ಕಂಡು ಹಿಗ್ಗುವನು, ಸ್ನೇಹದಲ್ಲಿ ಅರಿತು
ಒಂದೆ ನೂಲನೊಂ-ದೊಂದು ವಿಧದಿ ಬಿಗಿ-ದಾನು ಒಬ್ಬ ಅವಿತು ||೧೪||

ಒಂದು ಕುಗ್ಗಿದರೆ ಹಿಗ್ಗಿರುತ್ತೆ ಮ-ತ್ತೊಂದು ವೇಗದಲ್ಲಿ
ಮಧ್ಯ ನಿಲ್ಲೆ, ತ-ಕ್ಕಡಿಯ ಹಾಗೆ ಸಮ-ತೂಕ ಸೊಗಸು ಇಲ್ಲಿ ||
ಭಿನ್ನದೇಹ; ವಾ-ಗರ್ಥ, ಹೃದಯ ಚೈ-ತನ್ಯ ತಟ್ಟೆಯಲ್ಲಿ
ಒಂದೆ ತೂಕ ಇ-ಟ್ಟಾಡಿಸೋಕೆ ಆ ಕಾವನಯ್ಯ ಇರಲಿ ||೧೫||

**ರುಕ್ಮಿಣೀ - ಕಾಮ**

ಅರ್ಥ ಮಿಲನ ಬಯ-ಸುತ್ತೆ ಮಾತು, ತಾ ವ್ಯರ್ಥ ಆಗದಿರಲು,
ಬ್ರಹ್ಮ ಮಿಲನ ಬಯ-ಸುತ್ತೆ ಶ್ರುತಿಯು, ತಾ ಬಂಜೆ ಆಗದಿರಲು ||
ವಿಷ್ಣು ಮಿಲನ ಹಿರಿ-ಯಾಸೆ ಸಿರಿಗೆ ಧ-ನ್ಯತೆಯ ಗಳಿಸಲೆಂದು
ಕೃಷ್ಣಮಿಲನ ಬಯ-ಸಿದಳು ರುಕ್ಮಿಣಿಯು ಹಾಗೆ ಛಂದ ಅಂದು ||೧೬||

ತನ್ನ ಕೂಸು ಆ ಕಾಮ, ಮತ್ತೆ ತ-ನ್ನಲ್ಲೆ ಜನಿಸಲೆಂದು,
ತಾಯಿಯಾಸೆ, ರು-ಕ್ಮಿಣಿಯ ಮನದಿ ಇರ-ಬಹುದು ಲಕುಮಿಗಂದು ||
ಕೃಷ್ಣನಿಂದ ಜನಿ-ಸಿದರೆ ಮಾತ್ರ, ಆ-ಕರ್ಷಕತ್ವ ಮತ್ತೆ
ಕಾಮನಲ್ಲಿ ಮೈ-ಗೂಡಬಹುದು ಎಂ-ದವಳಿಗನ್ನಿಸಿತ್ತೆ ? ||೧೭||

**ಶಿಶು-ಪಾಲ ಕಾಮ**

ಸಿರಿಯನೆಲ್ಲ ಶಿಶು-ಪಾಲನೀಗೆ ಬಳ-ಸುವರೊ ಮೋಹಿ ಜನರು
ಜಗದ ಪಾಲನಿಗೆ ಸಲ್ಲಿಸೋಕೆ ಪ್ರತಿ-ರೋಧ ಮಾಡುವವರು ||
ಕೃಷ್ಣ ಹಗೆಯ ಶಿಶು-ಬೆಳೆಸುವಂಥ ಶಿಶು-ಪಾಲನೀಗೆ ಹೀಗೆ
ರುಕ್ಮಿ ರುಕ್ಮಿಣಿಯ ಮೀಸಲಾಗಿಸಲು ಹೊರಟ ಮೋಹದೊಳಗೆ ||೧೮||

ದುಷ್ಟ ದುರ್ಮತದ ಪಾಲನೀಗೆ ಶ್ರುತಿ-ಯನ್ನು ಬಳಸುವಂತೆ
ಪೂರ್ಣ ಸುಗುಣ ಪರ-ಬೊಮ್ಮನಲ್ಲಿ ನೈ-ರ್ಗುಣ್ಯ ಸಾರುವಂತೆ ||
ಲೋಕ ವಂಚನೆಗೆ ವೇದ ವಿಹಿತ ಆ-ಚಾರ ನಡೆಸುವಂತೆ
ಹರಿಯ ಜರಿದು 'ಶಿಶು-ಪಾಲ ರುಕ್ಮಿಣೀ' ಲಗ್ನವಿಟ್ಟನಂತೆ ||೧೯||

**ಶಿಶುಪಾಲ ಕಾಮ**

ಸಿರಿಯ ನೆಲೆಯ ಕೈ-ವಶಕೆ ಮೊದಲು ಹವ-ಣಿಸಿದ ದೈತ್ಯನಾಗಿ
ಸಿರಿಯ ರೂಪ ಅಪ-ಹರಿಸಲೆಂದು ಸಾ-ಧಿಸಿದ ರಾಕ್ಷಸಾಗಿ ||

ಈಗ ಸಿರಿಯ ಕೈ-ಹಿಡಿದು ಮೆರೆಯಬೇ-ಕೆಂದು ರಾಜನಾಗಿ
ಬಂದ ದುಷ್ಟ ಶಿಶು-ಪಾಲ ದುರ್ಜನರ ಕಾಮರೂಪನಾಗಿ ॥೨೦॥

ಕೃಷ್ಣ ಗುಣವ ಅಪ-ಲಾಪಿಸುತ್ತ ಅ-ದ್ವೈತವಾದಿಯಂತೆ
ಶ್ರೀಪತೀಯ ಸುಖ ಆಸೆ ಪಡುವ 'ಶ್ರೀ ವೈಷ್ಣವಾ'ಖ್ಯನಂತೆ ॥
ಅಡ್ಡ ಉದ್ದ ಮೂರ್ನಾಮದಂತೆ ಒಳ ಹೊರಗೆ ಕೆಲಸವಂತೆ
ಕಪಟ ಮದುವೆ ವಿಧಿ ನಡೆಸುವಲ್ಲಿ ಶಿಶು-ಪಾಲ ಕಾಮವಂತೆ ! ॥೨೧॥

**ಕೃಷ್ಣಕಾಮ**

ಮಾಡೊದಿಲ್ಲ ಅ-ಪ್ರಾರ್ಥಿತಾಗಿ ಏ-ನೊಂದು ತಾನು ಎಂದೂ,
ಮಾಡುತೇನೆ ಪ್ರತಿ-ಯೊಂದು ಶ್ರುತಿಯ ಪ್ರಾ-ರ್ಥನೆಗೆ ಮಾತ್ರವೆಂದು ॥
ತಿಳಿಸುತೇನೆ ಇದ-ನೆಲ್ಲ ವಿಪ್ರ ಮೂ-ಲಕವೆ ಜಗಕೆ ನಿತ್ಯ
ಎಂದು ಬಯಸಿ ಶ್ರೀ ಕೃಷ್ಣ ಮೆರೆವ ಪರಿ-ಪೂರ್ಣಕಾಮ ಸತ್ಯ ॥೨೨॥

ಪಾದದಾಸಿಗೂ ಹೃದಯ ಒಪ್ಪಿಸುವ ಸದಯವಾದ ಹೃದಯ
ಕಾಂತೆಗಾಗಿ ಪರಿತಪಿಸಿ ಹುಡುಕಿ ಕಾಡೆಲ್ಲ ಅಲೆದ ಮಾಯ ॥
ನಲ್ಲೆ ಓಲೆ ಕಳುಹಿಸಲು ಮತ್ತೆ ಏಳೋದ ಹೇಳೋದೇನು?
ಬೇಗ ಎದುರು ಮನರಥವ ತಂದು ಇಟ್ಟಾನು ತಾನೆ ಇನ್ನು ॥೨೩॥

**ವಿಪ್ರ**

ಸಕಲ ಶಬ್ದಗಳ ಅರ್ಥ ವಿಷ್ಣು ಪ್ರ-ಪ್ರಥಮ ಎಂದು ವಿ-ಪ್ರ
ವರ್ಣ ವರ್ಣಿಸಲು ಪೂರ್ಣ ಬಯಸುವನೆ ವರ್ಣವರ್ಯ ವಿಪ್ರ ॥
ವಿಷ್ಣು ದಾಸ್ಯ ಸುಖ ಕಾಮಿ ವೈಷ್ಣವನೆ ನಿತ್ಯವೂ ವಿಶಿಷ್ಟ
ಪ್ರಾಣದಾಸ್ಯ ಪಥ-ಗಾಮಿ ಪ್ರಾಣಿಯೇ ಸತ್ಯವು ಪ್ರಕೃಷ್ಟ ॥೨೪॥

ವೇದಮಾತೆ ಸಂ-ದೇಶ ಹೊತ್ತು ಪಯ-ಣಿಸುವ ವಿಶ್ವಮಿತ್ರ
ಭವದ ಕಡಲ ದಾ-ಟುತ್ತ ದಾಟಿಸುವ ಗುರುವೆ ಪ್ರಾಣಮಿತ್ರ ॥
ಹರಿಯ ಕಂಡು ಮಾ-ತಾಡಿ ಸನಿಹ ಕರೆ-ತರುವನೇ ವಿಶಿಷ್ಟ
ದುಷ್ಟ ಮತದ ಒಳ ಮರ್ಮ ಭೇದಿಸುವ ವಿಪ್ರನೇ ಪ್ರಕೃಷ್ಟ ॥೨೫॥

**ರುಕ್ಮಿಣಿಯ ವಿಪ್ರ**

ನಯನ ತೀರ್ಥದಲಿ ಪೂತನಾಗಿ ನಿ-ಟ್ಟುಸಿರ ಪಥದಿ ಬಂದು
ಗೂಢ ಅನಲ ಮಥಿ-ಸುತ್ತ ಪ್ರಕಟಶಿಖೆ-ಯಾಗಿ ಒಡನೆ ತಂದು ॥
ಕೆಟ್ಟ ವಿಷಯ ಆ-ಹುತಿಯ ಕೊಟ್ಟು ಇ-ಷ್ಟಾರ್ಥ ಹೊತ್ತ ತಾನು
ಮುಖದ ವರ್ಣ, ಮುಖ-ಜಾತ ವರ್ಣವರ ವಿಪ್ರನಲ್ಲವೇನು ? ॥೨೬॥

**ಕೃಷ್ಣನ ವಿಪ್ರ**

ಶ್ರುತಿಯ ಆದರವ ಗಳಿಸಿ ಮೆರೆವ ಸುಖ-ತೀರ್ಥದರಳಿ ಬಂದ
ಹೃದಯ ರೋಗ ಪರಿ-ಹರಿಸಲೌಷಧ-ವಾಗಿ ಮಹಿಮೆ ಪಡೆದ ॥
ಕೃಷ್ಣನೊಲುಮೆ ಗಳಿ-ಸೋಕೆ ಮೂಲ ಆ ಪತ್ರ ತುಲಸಿ ಪತ್ರ
ವಿಪ್ರರೂಪ ಪಡೆ-ದಿತ್ತು ಮತ್ತೆ ಮರೆ-ಯುತ್ತ ಕೃಷ್ಣಪತ್ರ ॥೨೭॥

**ಕವಿಯ ವಿಪ್ರ**

ಮಾತು ಮೂರ್ತಿ, ವೈ-ದರ್ಭಿ ರೀತಿ ವರ-ಜಾತಿ, ಕಾಮ ಶಿಖೆಯ
ಛಂದ ಚಂದನವೊ, ಪ್ರಾಸಹಾಸ, ಇತಿ-ಹಾಸ ಮಂತ್ರ ಹೃದಯ ॥
ಭಕ್ತಿ ಗೊತ್ರ, ಸಂ-ದೇಶ ಸೂತ್ರ, ರಸ ಜೀವಿ, ವಿಪ್ರ ಕಾವ್ಯ
ಭಾವಸತ್ರದಲಿ ಒಲಿಸುತಿಹನೊ ಶೃಂ-ಗಾರ ಹರಿಯ ಭವ್ಯ ॥೨೮॥

**ಶ್ರೀನಿವಾಸ ಕವಿ**

ಧರ್ಮ ದೇವತೆಯ ಆಗಲಿ ನಿನ್ನ ಕೃತಿ ಪುತ್ರಿ ಮಿಲನಕಾಗಿ
ಪ್ರೇಮದಿಂದ ಬರ-ದೋಲೆಯೊಂದು ಸಂ-ದೇಶ ಕಾವ್ಯವಾಗಿ ॥
ನುಡಿಸಿ ಬಿಟ್ಟೆ ಅದ-ನೀಗ ರುಕ್ಮಿಣಿಯ ಮುಖದಿ ರಸಿಕನಾಗಿ
ಸಲ್ಲಿಸುವೆಯೊ ಋಜು ವಿಪ್ರಮೂಲಕವೆ ನೈಜ ವಿಪ್ರನಾಗಿ ॥೨೯॥

ಯೋಗಿ ಹೇಗೆ ಅನು-ರಾಗ ಬಣ್ಣನೆಯ ಮಾಡಿಯಾನು ? ಎಂದು
ರಾಗಿ ಹೇಗೆ ಸ-ದ್ಯೋಗ ಸಾಧನೆಯ ಕೂಡಿಯಾನು ? ಎಂದು ॥
ಇಂಥ ಚಿಂತೆ ಕರ-ಗೀತು ನಿನ್ನ ರಸ-ಕಾವ್ಯ ಸವಿಯುವಾಗ
ತ್ಯಾಗಭೋಗ ಆ-ಸಕ್ತ ಯೋಗ ಜಗ-ಕರ್ಥವಾಯಿತೀಗ ॥೩೦॥

ವಚನ ವಿನಯ, ಸ-ತ್ಕಾರ ಅತಿಥಿ, ಸಂ-ಚಾರ ಸಾಧುಮಾರ್ಗ
ಸ್ನಾನ ಪಾನ, ಮೊಲೆ-ಹಾಲು ಕೂಸು, ಸತಿ ಪತಿಯು, ತ್ಯಾಗ ಯಾಗ ॥
ಅನ್ನ ಪ್ರಾಣ, ನಿ-ಷ್ಕಾಮ ಧರ್ಮ, ಹರಿ-ಭಕ್ತ ,ಕೂಡಿ ಇರಲಿ
ಎಂದು ವಿಪ್ರ ಸಂ-ದೇಶ ತಂದೆ ರುಕ್ಮಿ-ಣಿಯ ಕಾಮದಲ್ಲಿ ॥೩೧॥

ಹಾಳು ಬಿದ್ದ ಊ-ರಲ್ಲಿ ಗೌಡ ಆ-ದಾನು, ದೂತ ಕೂಡ
ಹಸಿವಿನಲ್ಲಿ ಹಳ-ಸನ್ನ ಕೂಡ ಹಿಡಿ-ಸೀತು ನಾಲ್ಗಿ ಕುರುಡ ॥
ಆದರಿಂದು ಕವಿ-ಕೋಟಿ ಮೆಟ್ಟಿ ಕವಿ-ಚಕ್ರವರ್ತಿ ನೀನು
ಉಂಡ ಒಡಲ ಹಸಿ-ವೆಬ್ಬಿಸುತ್ತ ಉ-ಣ್ಣಿಸಿತು ನಿನ್ನ ಜೇನು ॥೩೨॥

ವಿದ್ಯೆ ಪ್ರತಿಭೆ, ವಿಧಿ-ನಿಷ್ಠೆ ಪ್ರಜ್ಞೆ, ವಿ-ಶ್ವಾಸ ಪ್ರಚುರ ವಿಪ್ರ
ವಿನಯ ಪ್ರಣಯ, ವಿಷ-ವಿಷಯ ಪ್ರಚ್ಯುತಿಯ, ವಿಶದ ಪ್ರಜೆಯೆ ವಿಪ್ರ ॥
ವಿಷ್ಣುಭಕ್ತಿ ಪ್ರ-ತ್ಯಕ್ಷ ಮೂರ್ತಿ ಎಂ-ದಾಗಿ ನೀನೆ ವಿಪ್ರ
ಮತ್ತೆ ವಿಪ್ರ ಸಂ-ದೇಶ ರಚಿಸಿ ಕವಿ-ಭುವನದೇವ ವಿಪ್ರ ॥೩೩॥

**ಮಂದಾಕ್ರಾಂತ**

'ನಾನು ಮಂದ' ಎಂ-ದವನ ಮಾಂದ್ಯ ತೆರೆ-ದಿಡಲು ಅಂದವಾಗಿ
ನಿನಗೆ 'ಮಂದ ಆ-ಕ್ರಾಂತ ಛಂದ' ಕಂ-ಡಿತ್ತೆ ಛಂದವಾಗಿ ? ॥
ಮಂದವಾಗಿ ಮನ-ದೊಳಗೆ ನುಸುಳಿ ಆ-ಕ್ರಮಿಸುತಾನೆ ಎಲ್ಲ
ಎಂದು ಕಾಮ ಸ್ವ-ಚ್ಛಂದ ನಡತೆ ಈ ಛಂದ ಹೌದೆ ? ಬಲ್ಲ! ॥೩.೪॥

ನಲ್ಲೆ ವಲ್ಲಭನ ಎದೆಗೆ ಮೆಲ್ಲನು-ಗ್ಗಿದರೆ ಮಾತ್ರ ಅಂದ
ಹಾಗೆ ಅವಳ ಮಾ-ತಲ್ಲಿ 'ಮಂದ ಆ-ಕ್ರಾಂತ' ಛಂದ ಛಂದ ॥
ಕಾಮವೇಗದಲಿ ಗುಡುಗುತಿರುವ ಮಾ-ತಲ್ಲಿ ನಡತೆಯಲ್ಲಿ
ಮಂದ ಮಾತ್ರ ಈ ಛಂದ ಹಿಡಿದು ಒ-ದ್ದಾಡುತಾನೆ ಬಳಲಿ ॥೩.೫॥

**ಸಂದೇಶ ಕಾವ್ಯ**

ಗರುಡನೆದುರು ಶುಕ ಕಾಕ ಕೋಕ ಬಕ ಕೇಕಿ ಸೋಲಬಹುದು
ಗರುಡನೊಡೆಯ ಹಣಿ-ಮಣಿದ ವಿಪ್ರನೆದು-ರೇನು ಗರುಡ ಹಿರಿದು ॥
ಮೇಘದೂತ ಈ ವಿಪ್ರನೀಗೆ ನಿಜ ಪೂರ್ವದೇವನೆಂದು
ಪೂರ್ವಪಕ್ಷ ಬಂ-ದಾಗ ತಾನೆ ಸಿ-ದ್ಧಾಂತ ಅಮೃತಬಿಂದು ॥೩.೬॥

ಬ್ರಾಹ್ಮದೇವನೆದು-ರಲ್ಲಿ ವಿಪ್ರ ಎಂ-ದೆಂದು ದೂತನಲ್ಲ
ಎಂದು ವಿಪ್ರ ಸಂ-ದೇಶ ಕಾವ್ಯ ನಿಜ ದೂತಕಾವ್ಯವಲ್ಲ ॥
ಇದು ವೇದ ಪಾದ ಮುಟ್ಟುತ್ತ ಗಟ್ಟಿ ಕ-ಟ್ಟಿದ್ದ ಸುಬ್ಬಗಬ್ಬ
ಗುರುವಾದಿರಾಜ ಶಿಷ್ಯತ್ವ ಪಟ್ಟ ಬೆ-ನ್ನಟ್ಟಿ ಬಂದ ಹಬ್ಬ ॥೩.೭॥

**ಭಾವ ಮಜ್ಜನ**

ಭಾವವರ್ಣನವೊ ಭಾವ ವಿವರಣವೊ ಭಾವಕಥನವೇನೊ,
ಕೋವಿದರೆ ನುಡಿದು ಜೀವ ನೀಡಿದ್ದರೆ ಕವನ ಗೆಲವು ಕಾಣೊ ॥
ನಾವಿಕನು ಯಾರು ಈ ವಿದುಷ ಕವಿ ಭಾವ ಕಡಲ ಮುಂದೆ
ಭಾವಮಜ್ಜನದ ಸೇವೆಗಿಳಿದೆ ಗುರು-ದೇವ ಇರಲಿ ಹಿಂದೆ ॥೩.೮॥

ಯಾರಿಗಿಲ್ಲ ? ವರ-ಕವಿಯ ದಾರಿ ತುಳಿ-ಬೇಕು ಎಂಬು ತುಡಿತ,
ಭಾವ ಚಂದಮನ ಗ್ರಹಣ ಮಂಕು ತಂ-ದೀತು ಎಂದು ಭೀತ ॥
ಭಾವ ಕಡಲ ಅಲೆ-ಯೊಂದರಲ್ಲಿ ತಲೆ ಬಾಗಿಸುವೆನೊ ಇಲ್ಲಿ
ತಂದೆ ತಾಯಿ ಈ ಕೂಸಿನಾಟ ಹರಸುತ್ತ ಕಾಯುತಿರಲಿ ॥೩.೯॥

**ಉಪಸಂಹಾರ**

ಕಾಡು ಮೇಡು ಮೇ-ವುಂಡ ಹಸುಗೆ ಚಿಗು-ರುಲ್ಲು ಬೇಡವೇನು?
ಮೂಲ ಸೊಗಡು ಕಂ-ಡಿದ್ದ ಜನಕೆ ಈ ಕವನ ರುಚಿಸದೇನು?
ನೆನಪಿನಂಗಳದ ಬೆಳ್ಳಿತಟ್ಟೆಯಲಿ ಇಟ್ಟೆ ಗರಿಕೆಯೊಂದು
ಶ್ರೀನಿವಾಸಕವಿ-ಗೊಲಿದ ಕುದುರೆಗಿದು ಇಷ್ಟವಾಗಲೆಂದು ॥೪೦॥

|| ಶ್ರೀ ಗುರುರಾಜೋ ವಿಜಯತೇ ||

ಶಂಖ ಮುದ್ರೆ ಜಪ-ಮಾಲೆ ಪುಸ್ತಕವ ಕಮಲಕೈಗಳಿಂದ
ಪಿಡಿವ, ವೇದಗಳ ನುಡಿವ, ನಾಲ್ಮೊಗಗೆ ಮುಖದಿ ವೇಗದಿಂದ ||
ಅಮೃತಕಿರಣ ಚಂ-ದಿರನ ಪರಿಯೆ ಪರಿ-ತಾಪ ಕಳೆವ ಜಗಕೆ
ತುರಗಮುಖನ ಬಲು-ಚೆಲುವಮೂರ್ತಿ ಮನ-ದಲ್ಲಿ ಪೊಳೆಯಲೆನಗೆ ||★||

ಅರಸರಾಳ್ವ ದೊರೆ-ಯಾಗಿ ಭೀಷ್ಮಕನು ಹೆಸರುವಾಸಿಯಾದ
ಹೋಮ ಹೊಮ್ಮಿಸಿದ ಧೂಮಗರ್ಭದ ವಿ-ದರ್ಭದೊಳಗೆ ಇದ್ದ ||
ತುಂಬಿ ಕೆಚ್ಚಲನೆ ಸೋರಿ ಹರಿವ ಹೊಳೆ-ಹಾಲನೀವ ಗೋವ
ಧಾರೆಗೆರೆವ ಜಲ-ಧಾರೆಯಲ್ಲಿ ಕೆರೆ-ಯಾಯಿತಂತೆ ಚೆಲುವ ||೧||

ಚೆಲುವ ಯುವತಿ ಒ-ಯ್ಯಾರ ಮೆರಗ ಅರ-ಮನೆಯ ಸೊಬಗ ಪೊತ್ತ ,
ರಾಜರಾಜಮದ ಮುರಿವ ವರ್ತಕರ ಸಿರಿಯು ಸುತ್ತ ಮುತ್ತ ||
ವೇದ ಘೋಷಿಸುವ ವಿಪ್ರಗಣಕೆ ಕುಂ-ಡಿನೆಯು ತುಂಬುತಿತ್ತ
ಮಾರುಕಟ್ಟೆ ಸಿರಿ-ಯಾಟಕೆಂದು ಅದು ಸಗ್ಗ ಮೀರಿಸಿತ್ತ ||೨||

ನೇರ ಅಗಲ ಊ-ರಲ್ಲಿ ದಾರಿ ಕ-ನ್ನಡಿಯ ಹಾಗೆ ಹೊಳೆಯೆ
ನಡೆವ ಚೆಲುವೆಯರು ಕಂಡು ತಮ್ಮ ನಿ-ಲ್ಲುತ್ತ ಮೈಯ ಮರೆಯೆ ||
ಹೆಜ್ಜೆ ಹೆಜ್ಜೆಗೂ ವೇಷಭೂಷ ತೀ-ಡುತ್ತಲುಬ್ಬಿಸೆದೆಯ
ಬೀಗಿ ಹಿಗ್ಗುತಿರೆ ಸಾಗಲಾಗದಾ ಹಾದಿಯಲ್ಲ ಕಿರಿಯ ||೩||

ಪೂವ ತೋಟ ಪರಿ-ಮಳದಲಿಟ್ಟ ಸವಿ-ಯೂಟ ಸುಖದಕೂಟ
ರಾಗ ತಾನ ಆ-ಲಾಪ ಸರಸ ಸ-ಲ್ಲಾಪ ಹೆಂಗಳಾಟ ||
ಚಿನ್ನದಂಥ ನೆಲ-ವಿರಲು ಸಿಗಲು ಕವಿ-ಗುರುಗಳಡಿಯು ಕೈಗೆ
ಜಗವ ತಿರುಗಲಾ-ಊರೆ ತೋರ್ಪುದಮ-ರಾವತೀಯ ಹಾಗೆ ||೪||

ಚೆಲ್ವಿಕೇಗೆ ಕೊನೆ ಇರದ ಖನಿಯು ಅಭಿ ಮಾನಿ ಮಂಜುಲತೆಗೆ
ಹೃದಯ ನಯನ ತಂ-ಪೆರೆವ ಕಳೆಯಸಂ-ದಣಿಯು ಎಲ್ಲ ಕಡೆಗೆ ||
ಇದ್ದಳಾ ದೊರೆಗೆ ಮಗಳು ರುಕ್ಮಿಣೀ ಎಂಬ ಭಾಗ್ಯವಂತೆ
ಮುದ್ದುಮಮತೆನೆರೆ-ಗರಳಿದಂಥ ಮೈ-ಬಳ್ಳಿಯವಳಿಗಂತೆ ||೫||

ಅವಳ ಚಲ್ವಿಕೆಯು ಯೌವನದ ಹದಿ-ಹರೆಗೆ ಸಿಕ್ಕಿ ಉಕ್ಕಿ
ರಾಜ್ಯ ಬೆಳೆಸಿ ಸೊ-ಕ್ಕಿರುವ ಗಂಡಸರ ಮನಕೆ ತಾಕಿ ಹೊಕ್ಕಿ ||
ಬೇಡಿಯಾಗಿ ಬಿಗಿ-ಯಾಗಿ ಬಿಗಿತು, ಯೌ-ವನದ ಹುಚ್ಚಗಂತು
ಚಿಂತೆಕಾಂತೆಯೊಡ-ನೊಲವ ಹುಟ್ಟಿಸಲು ಜಾಣದೂತಿಯಾಯ್ತು ||೬||

ವರುಣದೇವ ಮಾ–ಧವಗೆ ರಮೆಯನೊ–ಪ್ಪಿಸುವ ಪರಿಯೆ ಹರಿಗೆ
ಮಗಳ ಪುಟ್ಟುತ್ತಲೆ ಮನದಿ ನೀಯೆ ನೆ–ಮ್ಮದಿಯ ಬಾಳು ದೊರೆಗೆ ॥
ಮಡದಿ ತನಯ ತನು–ಮನವು ಧನವು ಮಾ–ಡಿರುವ ಸಕಲ ಕರ್ಮ
ಹರಿಯ ಕರವು ಎಂ–ದರಿತು ಸುಖಿಸುವುದೆ ಯೋಗಮಾರ್ಗ ಮರ್ಮ ॥೭॥

ಅವಳ ಅಣ್ಣ ಮ–ದ್ದಾನೆಯಂತೆ ಉ–ನ್ಮತ್ತ ಸೊಕ್ಕಿನಿಂದ
ಕೀರ್ತಿಶಾಲಿ ಎದು–ರಾಳಿ ಬಲವಳಿದು ಶಿವನ ವರಗಳಿಂದ ॥
ಯೌವರಾಜ್ಯ ತ–ನ್ನಪ್ಪನಿಂದ ಕಬ–ಳಿಸಿದ ರುಕ್ಮಿ ಅಂತೆ
ಕೃಷ್ಣ ಹಗೆಯ ಕ–ಗ್ಗತ್ತಲೊಳವನ ಮನಸು ಗೂಗೆಯಂತೆ ॥೮॥

ರುಕ್ಮಿ ರುಕ್ಮಿಣಿಯ ಮದುವೆ ವಯಸು ನೋ–ಡುತ್ತ ಕೃಷ್ಣನಲ್ಲಿ
ಹಗೆಯ ತೀರಿಸಲು ಸೇರಿಕೊಂಡು ಶಿಶು–ಪಾಲವಲಯದಲ್ಲಿ ॥
ತಂಗಿಯನ್ನವಗೆ ನೀವೆ ಎಂದ ಲೆ–ಕ್ಕಿಸದೆ ಅಪ್ಪನನ್ನೂ
ನಾಶಕಾಲವಿರ–ಲಂತು ದುರ್ಜನರ ಬುದ್ಧಿ ಕೆಡುವುದಿನ್ನೂ ॥೯॥

ಪತ್ತೆ ಹಚ್ಚಿ ತ–ನ್ನಣ್ಣ ಬಗೆದ ಸಂ–ಚೆಲ್ಲ ಅವಳು ಬೇಗ
ಅಸುರ ಕುಲದ ಮದ ಹಾರಿಹರಿಯ ಮೇ–ಲಿರಲು ಪ್ರೇಮಯೋಗ ॥
ತೋರಗೊಡದೆ ನಾ–ಚಿಕೆಯ ಸಿರಿಗೆ ತ–ನ್ನಾಸೆ ಕೂಡಲೆಂದು
ಹೆಜ್ಜೆಯಿಟ್ಟಳದು ಸಹಜ ಜಾಣೆಯರ ನಡತೆ ಗೂಢವಹುದು ॥೧೦॥

ತಗ್ಗಿ ಬಗ್ಗಿರುವ ನಾರಿ ಹಿರಿಯರಾ ಮೀರಿ ನಡೆವುದೆಂತು ?
ಹರಿಯ ತೊರೆದು ಹಿಂ–ತಿರುಗಲೊಮ್ಮೆಯೂ ಬಗೆಯ ಬಗೆಯದಿಂತು ॥
ಚಿಂತೆ ಕಾಡಿಸುತ–ಲಿದ್ದರೂನು ಧೃತಿ–ಗೆಡದೆ ನಡೆದಳವಳು
ದಿಟ್ಟ ಕನ್ನಿಕೆಯ ಎದೆಯು ನಡುಗದೋ ಕಷ್ಟಕಾಲದಲ್ಲೂ ॥೧೧॥

ಉಗುರ ಗುರುತ ಎ–ನ್ನೆದೆಯ ತುಂಬ ನೀ ಮೂಡಿಸೆಂಬುವಂತೆ
ವರ್ಣಮಾಲೆ ಮೂ–ಡಿಸಲು ಕಮಲದೆಲೆ ಕೆಂಪು ಕಮಲದಂತೆ ॥
ಬರೆದಳವಳು ಸರ–ಸರನೆ ರಸಮಯ ವಿಷಯರೀತಿಯಂತೆ
ತನ್ನ ಹೃದಯ ತೆರೆ–ದಿಡುವ ಕಾಗದವು ಅವಳ ದೂತಿಯಂತೆ ॥೧೨॥

ಕರ್ಮವೆಲ್ಲ ಭಗ–ವಂತಗೊಪ್ಪಿಸಲು ವಿಪ್ರಮೂಲವಿರಲು
ಪ್ರೀತಿಕರವು ಹರಿ–ಗೆಂದು, ಜಗಕೆ ತಿಳಿ–ಪಡಿಸುವಂತೆ ಅವಳು ॥
ಶಾಸ್ತ್ರಕಡಲಕಡೆ–ವಚಲಮತಿಗೆ ಹೆಸ–ರಾದ ವಿಪ್ರನನ್ನು
ಪತ್ರವಾದರದಿ ಕೃಷ್ಣಗರ್ಪಿಸಲು ಕರೆದಳೋರ್ವನನ್ನು ॥೧೩॥

ಸತ್ಯಶಾಂತಿ ಮೊದ–ಲಾದಮೌಲ್ಯಗುಣ–ಮಣಿಯ ಕಿರಣದಿಂದ
ಜನರ ಮನದ ಕ–ಜ್ಜಳವ ಕಳೆವ ಅವ–ಗಿಲ್ಲ ದೋಷಬಂಧ ॥

ಮೂಗುದಾರ ಸೆರೆ-ಯಾದ ಎತ್ತಿನೋಲ್ ಹರಿಯು ಆರ ಹಿಂದೆ
ಭಕುತಿಪಾಶಕನು-ಸರಿಪನಾ ಸುಜನ-ಗಣಕೆ ಅವನೆ ಮುಂದೆ ॥೧೪॥

ಮೇಘದೂತನಿಗೆ ದಾಸನೊಬ್ಬ ಕಳು-ಹಿಸಲು ಒಲಿಪಿನೋಲೆ
ಬುದ್ಧಿಯಿರದ ಊರೊಡೆವ ಹಕ್ಕಿ ಮೊರೆ ಹೊಕ್ಕಳೊಬ್ಬ ಅಬಲೆ ॥
ಸಹಜ ಜಾಣ ಆ ದ್ವಿಜನ ಮೊರೆಯು ಈ ಕಾಮಿನೀಯ ಉಸಿರು
ಕಾಮ ಆಕ್ರಮಣ-ದಲ್ಲು ಉತ್ತಮರು ದೈನ್ಯ ತೋರಗೊಡರು ॥೧೫॥

ಹೆಣ್ಣಹುಟ್ಟುಗುಣ ಲಜ್ಜೆ ಅವನೊಡನೆ ನುಡಿಯಲಡ್ಡಿಪಡಿಸೆ
ಎಲ್ಲ ಬಲ್ಲ ಈ ವಿಪ್ರನಲ್ಲಿ ಮರೆಮಾಚೆ ಮೋಸವೆನಿಸೆ ॥
ದ್ವಂದ್ವದಲ್ಲವಳು ನುಡಿಯಲಿಳಿದಳೋ ಸರಸಮಧುರವಾಗಿ
ಗುರುಗಳೊಡನೆ ನಿ-ಷ್ಕಪಟನಡತೆಯೇ ಭವ್ಯಬಾಳಿಗಾಗಿ ॥೧೬॥

ಬಲ್ಲೆ ನಿನ್ನ ಜಗ ಬಾಗುವಂಥ ಮನೆ-ತನದ ವಿಪ್ರನೆಂದು
ಮತ್ತೆ ಪ್ರಾಣಿಸಾ-ಮಾನ್ಯದಲ್ಲು ನೀ ಸಹಜಕರುಣಸಿಂಧು ॥
ಅದಕೆ ಓಯ್ಯಲೀ ಓಲೆ ಕೃಷ್ಣನಿಗೆ ಬೇಡ್ವೆನಯ್ಯ ಬಹಳ
ಸುಜನ ಕೈಪಿಡದ ತರುಣಿಬೇಡಿಕೆಯು ಎಂದು ಬಂಜೆಯಲ್ಲ ॥೧೭॥

ಗಮನವಿಟ್ಟು ಕೇ-ಳಯ್ಯ ಮತ್ತೆ ಈ ಮಾತ ನಮಿಪೆ ನಿನಗೆ
ತೆರಳಲೇಬೇ-ಕೀಗ ದ್ವಾರಕೆಗೆ ಜಗದ ಕರ್ಣಮಣಿಗೆ ॥
ಮಹಡಿ ಮೇಲೆ ಚಲು-ವಿಯರ ಹಾಡು ಮು-ನ್ನಡೆವ ಕುದುರೆ ಕೇಳೆ
ಬಾನಿನಲ್ಲಿ ಬೆಂ-ಗದಿರ ಸಾರಥಿಗೆ ಬೆವರು ಹರಿಯಿತಲ್ಲೇ ॥೧೮॥

ಯಾರ ಕಾಂಬರೊ ಸ-ಮಾಧಿಯಲ್ಲಿ ಮಥಿ-ಸುತಲೆ ವೇದಶಾಸ್ತ್ರ
ಯಾರ ಸನಿಹ ಮನ ವಚನ ದೂರ ಸುಖ ನೀವ ಆತಪತ್ರ ॥
ಅವನ ಕಾಂಬೆ ನೀ ಪೋಗಿ ದ್ವಾರಕೆಗೆ ದೂಷ ಸೋಕದವನ
ಕೃಷ್ಣನೆಂಬ ಪರ-ಬೊಮ್ಮನಮಿತಗುಣ-ಪೂರ್ಣರೂಪವನ್ನ ॥೧೯॥

ಮಿಂಚಿನಂತೆ ಜನಿ-ವಾರ ಚಲಿಸುತಿರೆ ನೀಲ ಮೈಯೊಳಂದು
ವೇದಘೋಷ ಗುಡು-ಗಿಸಲು ನಿನ್ನ ಭಾ-ವಿಸುತ ಮೋಡವೆಂದು ॥
ಕೇಕಿ ಚಾಕಿ ಸುಖಿ-ಉಕ್ಕಿ ಕುಣಿದು ಸಿಹಿ-ಕೊರಳ ಸಿರಿಯ ತೋರಿ
ಸ್ವಾಗತಿಸುತವೆ ಗೃ-ಹಸ್ಥರಂತೆ ಬರ-ಲತ್ತ ಬಾರಿ ಬಾರಿ ॥೨೦॥

ಕೇಳಿ ನಿನ್ನ ಮುಖ-ಕಮಲದಿಂದ ಕೆಳ-ಗಿಳಿದ ಕೃಷ್ಣನಾಮ
ಕೇಳಿದಂಥ ಆ ಕೃಷ್ಣ ಚಲ್ವಿಕೆಯ ನೆನಪು ಬರಲು ಭೌಮ ॥
ಬಿಗಿದ ಕಂಠದಿಂ ಏನೋ ಧೇನಿಸುತ ಮನದಿ ಸ್ತ್ರೀಯರಾಗ
ಪೂಜಿಸುವರೊ ಅ-ಲ್ಲಲ್ಲಿ ಹಿಗ್ಗದಿರು ನಡೆಯೊ ನೀನು ಬೇಗ ॥೨೧॥

ಕಂಸ ಹಂತಕನ ಊರ ದಾರಿ ಸುಖ-ವಾಗಿ ಕೇಳು ಮೊದಲು
ಮತ್ತೆ ಎನ್ನ ಸಂ-ದೇಶ ಮಾತ ಒಳಗಿರಿಸು ನಿತ್ಯದಲ್ಲು ॥
ನನ್ನ ಪತ್ರ ಟೊಂ-ಕಕ್ಕೆ ಸಿಕ್ಕಿಸಿರು, ಗಟ್ಟಿ ಗಂಟು ಹಾಕಿ
ಬಟ್ಟೆಯಂಚೆಗಡ-ವಿಟ್ಟು ಗೌಪ್ಯತೆಯ ಕಾಯೊ ಲೆಕ್ಕಹಾಕಿ ॥೨೨॥

ಬೇಗ ಹೊರಟು, ಈ ಊರಿನಿಂದ ನೀ ದಾಟಿ ವರದ ನದಿಯ
ಪೊಂದು ಕಣ್ಮನವ ತಣಿಸಿಕುಣಿಸುವಾ-ಶ್ರಮದಿ ಶುಕ್ರಋಷಿಯ ॥
ಮಗಳ ಮಮತೆ ಘೃತ-ವುರಿಸೆ ಅವನ ಕಡು-ಕೋಪ ಬೆಂಕಿಯಲ್ಲಿ
ತಪ್ಪಿ ಪ್ರಾಯವಾ-ಹುತಿಯ ಕೊಟ್ಟನೊ, ಯ-ಯಾತಿ ಕೈಯ ಚೆಲ್ಲಿ ॥೨೩॥

ತಪವಗೈವರಾ ಪುಣ್ಯತಾಣ ನೀ ತೊರೆದು ನಡೆಯೊ ಮುಂದೆ
ತಾಪಿಯೆಂಬ ಸಿಹಿ-ನೀರ ಹರಿವ ಹೆ-ದ್ದೊರೆಯು ಸಿಗುವುದಂದೆ ॥
ಅಲ್ಲಿ ಮೀವ ಬೇ-ಡತಿಯ ಕಣ್ಣಣೆಯ ಕಂಡು ಬೆವೆತು ಸೊರಗಿ
ಬಯಸಿತೋ ಅವಳ ಹೊಕ್ಕಳೊಕ್ಕಲಾ ಮೀಂಗಳಡಗಲೋಗಿ ॥೨೪॥

ಹೊಳೆಯ ಪರಿಮಳವು ಸಾಕೊ ಇಲ್ಲಿ, ನಡೆ ವಿಂಧ್ಯನಾಡಕಡೆಗೆ
ಮುಗಿಲ ಕಂಗಳಿಗೆ ತೋರ್ಪುದದುವೆ ಓ-ಡಾಣ್ಯದಂತೆ ಧರೆಗೆ ॥
ತಾರೆಯಂತೆ ಹೂ-ರಾಶಿ ಹೊತ್ತು ಒತ್ತಾದ ಮರದ ಸಾಲು
ಬೆಟ್ಟ ಹತ್ತಿಳಿವ ನಿನಗೆ ದಿವ್ಯ ಪರಿ-ಮಳವ ನೀವುದಲ್ಲೊ ॥೨೫॥

ಅಲ್ಲೆ ಇರುವ ಯಾ-ಜ್ಞಿಕರ ಕಡುತಪಕೆ ಆತಪೇಶ ಬೆವತ
ಯಜ್ಞದಗ್ನಿ ಬಿಸಿ ತಾಕೆ ತಳಕೆ, ಹೊಗೆ-ಯಲ್ಲೆ ಸಗ್ಗದ ಸದ ॥
ಅದರ ಫಲವೊ ! ಸಿಂ-ಹಿಣಿಯ ಸಹಜ ಸಿಹಿ ಮೊಲೆಯ ಹಾಲ ಮಮತೆ
ತಾಯಿ ಸಿಗದೆ ಕಂ-ಗೆಟ್ಟ ಪುಟ್ಟ ಕರಿ-ಮೃಗದ ಮರಿಗು ಅಂತೆ ॥೨೬॥

ಅತಿಥಿಯಂತೆ ಆ-ದರವೊ ಅಲ್ಲಿ ಸವಿ-ಯೂಟ ಮಾಡೊ ಅಗ್ಗ
ಅಮೃತವೇಕೆ? ಹುರು-ಪಾಗೆ ಪಯಣಕೇ ನಡೆಯೊ ಪಶ್ಚಿಮಕ್ಕೆ ॥
ರೇವೆ ಪರಿಸರದ ಗಾಳಿ ತುಸು ಎಳೆದು ಮನಸು ತಣಿಸಿಕೊಂಡು
ಕಾಣವಂಥ ಸಂ-ಗತಿಯ ಕಂಡು ಖುಷಿ ಪಡೆವೆ ಬೆರಗುಗೊಂಡು ॥೨೭॥

ರೇವೆ ದಡದ ಹೂ-ಹಂದರಕ್ಕೆ ಓ-ಡೋಡಿ, ಸುರತವಾಡಿ,
ದಣಿದ ಹೆಂಗಳಿಗೆ ಮತ್ತೆ ಮುತ್ತೆ ಹೂ-ಬಾಣ ಬಾಣಹೂಡಿ ॥
ಮೈಗೆ ಅಂಟಿರುವ ಬೆವರ ಹನಿಯ ಹನ್ನೀರ ಧಾರೆ ಆಗ
ಕಾಮನಲ್ಲಿ ಕಾ-ಮುಕರು ಗೈದ ಹೂ-ಮಳೆಯ ಹಾಗೆ ಸೊಬಗ ॥೨೮॥

ಊರ ಮಂದಿ ಬಾ-ಯಿಂದ ಹೊಂದಿ, ಆ ರೇವೆ ಹಾದಿಯನ್ನು
ಅದರ ದಡಕೆ ನೆಲೆ-ನಿಂತ ಶಿವನ ಮನ-ದೊಳಗೆ ಕೂಡಿಸಿನ್ನೂ ॥
ನಿತ್ಯ ಮಡಿ ಮಡಿಯ ತಪಕೆ ಶಮದಮಕೆ ವಿಮಲವಾದ ನಿನ್ನ
ಹೃದಯ ಗುಡಿಯೆ, ಹರಿ-ಭಕುತಿ ಸುಧೆಯ ಹರಿ-ಸಿರಲು ಅವಗೆ ಚೆನ್ನ ॥೨೯॥

ಹೊಳೆವ ಚೆಲುವ ಮೊಲೆ-ಜೋಡಿ ಕನ್ನಡಿಗೆ ಮೂಡೆ ಮುಖಗಳೈದು
ನೋಡಿ ದಶಮುಖನೆ ಬಂದನೆಂದು ಪಾ-ರ್ವತಿಯು ಬೇಗ ಬಗೆದು ॥
ಮತ್ತೆ ಎಂತು ಕೈ-ಲಾಸದಗಲಿಕೆಯೊ? ಎಂದು ಹೆದರಿ ಶಿವನ
ಅಪ್ಪಿ ಬಿಗಿಯೆ ಹಿಮ-ಗಿರಿಜೆ ಮೈಗೆ ಬಳಿ-ತಂತೆ ಬೂದಿಯೇನ ? ॥೩.೦॥

ಭೂತರಾಜ ಶಿವ ಆದರೂನು ಜಗ-ಕವನೆ ಅಭಯದಾತ
ಬೀಡು ಬರಡುಸುಡು-ಗಾಡೆ ಇದ್ದು, ಅವ-ನಿಂದೆ ಜಗವು ಪೂತ ॥
ಬೇಡಲಲೆದರೂ ಜಗದಿ ಬೇಡುವರ ಬೇಡಿಕೆಯನೆ ನೀವ
ವಿಷವ ಕುಡಿದರೂ ಅಮೃತ ಕುಡಿದವರ ಸೇವೆ ನಿತ್ಯ ಪಡೆವ ॥೩.೧॥

ಮತ್ತೆ ಮತ್ತೆ ಆ ಶಿವಗೆ ಹೇಳು, ನಾ ನಮಿಸಿ ಬೇಡ್ವೆನೆಂದು
ಗಿರಿಜೆ ಕಡುತಪಸು ನಡೆಸೆ, ವರ ಸುರಿಸಿ-ದವನು ನೀನೆ ಅಂದು ॥
ಹಾಗೆ ಎನಗು ಹರಿ-ಯೊಲುಮೆ ಅಮೃತ ಮಳೆ-ಬರಿಸೊ ಸೇರಿಸಿಂದು
ಭಜಿಪ ಜನಕೆ ವೈ-ಭವದ ಬಾಳು ನಿ-ನ್ನಿಂದ ಬಲ್ಲೆ ಎಂದೂ ॥೩.೨॥

ಅಗ್ರಹಾರ ಭೃಗು-ಕುಲಕೆ ತೀರ ಆ ರೇವೆ ದಾಟಿ ಇನ್ನೂ
ಅದರ ಸನಿಹ ಹೂ-ತೋಟದಾಶ್ರಮವ ನೋಡಿ ನಡೆಯೊ ನೀನು ॥
ಅಲ್ಲಿ ಬಳ್ಳಿಗಿಡ-ಕೆಲ್ಲ ನೀರುಣಿಸೆ, ತರುಣಿ ಟೊಂಕ ಬಿಟ್ಟು
ಮುಟ್ಟಿ ಗಟ್ಟಿ ಮೊಲೆ, ಖುಷಿಯೊ ಕೊಡಕೆ, ಸಾಮ್ಯತೆಗೆ ಸ್ನೇಹವಿಷ್ಟು! ॥೩.೩.॥

ವಿಂಧ್ಯ ತಪ್ಪಲಿಗೆ ಹೂವರಾಶಿ ಅರ-ಳಿಸುವ ಮರಗಳನ್ನ
ಅಪ್ಪಿ ಬರುವ ಪರಿ-ಮಳವ ಶರುವ ತಂ-ಗಾಳಿ ತಣಿಸೆ ನಿನ್ನ ॥
ನಡೆಯೊ, ಮಾಲವಕೆ ಹೆಸರುವಾಸಿ ಆ ನಾಡು ಮೂಜಗಕ್ಕೆ
ನಡೆವ ರವಿಗು ಹಿಂ-ಜರಿಕೆಯಂತೆ ದೊರೆ-ದಾಳಿಗೈವ ಭಯಕೆ ॥೩.೪॥

ವಿದುಷ ! ಅಲ್ಲಿ ನೀ ಕಾಂಬೆ 'ಧಾರಾ' - ಎಂಬ ರಾಜಧಾನಿ
ಮುತ್ತು ಸುತ್ತೊರೆದು ಸ್ಫಟಿಕ ಖಚಿತ ಛಾ-ವಣಿಯ ಮನಿಗಳೋಣಿ ॥
ತೋರ್ಪುದಯ್ಯ ಸುಧೆ-ಮೀರಿ ಮೆರೆವ ನುಡಿ-ನುಡಿವ ವಿದುಷಜನರ
ಕೀರ್ತಿ ಬಿಂಬಕೆ ದಿ-ಗಂತ ಸೊಚ್ಚ ಬೆಳ-ದಿಂಗಳಂತೆ ನಗರ ॥೩.೫॥

ಬೇಗ ಮುಂದೆ ನಡಿ, ಕಪಿಲ ಮುನಿಯ ಸವಿ-ನುಡಿಯ ಅಮೃತಬಿಂದು
ತುಂಬಿದಂತೆ ಜಲ-ಬಿಂದು ಸಂದಿರುವ ಬಿಂದು ಸರವ ಹೊಂದು॥
ತಾರೆಯಂಥ ತಾ-ವರೆಯ ಸುತ್ತ , ತಿರು-ಗಾಡೆ ಭೃಂಗ ಬಳಗ
ತೋರ್ಪುದೀ ಕೊಳವು ಗಹನ ಗಗನವೋಲ್ ಕಣ್ಣಿಗುಣಿಸಿ ಸೊಬಗ ॥೩.೬॥

ಮೀವ ಮೃದಲ ಹೂ-ಮೈಯ ಗುರ್ಜರಿಯ-ರಂದು ಬಿಡಿದ ಮೇಲೆ
ಅಡಗಿಕೊಂಡ ವಾ-ಸನೆಯ ಮೊಲೆಗೆ ಮೇ-ಲಿದ್ದ ಅಲೆಯ ಮಾಲೆ ॥
ಕಾಮಕೇಳಿಯೋ-ಳವರ ಪೌಷ್ಟಿಕತೆ ಊಹಿಸಿದರೆ ಅತ್ತ
ಮಿಂದು, ಆಹ್ನಿಕವ ಮಾಡಿ, ಕುಡಿದು ಸಿಹಿ-ನೀರ, ನಡೆಯೊ ಇತ್ತ ॥೩.೭॥

ಸ್ವಲ್ಪ ಸಾಗು ಗೋ-ಕುಲವ ಕಾಂಬೆ ದನ-ಕರುಗಳಲ್ಲಿ ನಿನ್ನ
'ಕೃಷ್ಣ' ಎಂದು ಸಿಹಿ-ನುಡಿವ ಮುಖವ ಕಾ-ಣುತ್ತಲೊಮ್ಮೆ ತನ್ನ ॥
ಮೇವ 'ಹಾಲ-ಮೊಲೆ' ಎಲ್ಲ ಬಿಟ್ಟು, ಕಿವಿ ನಿಮಿಸಿ, ಬಾಷ್ಪ ಸುರಿಸಿ
'ಅಂಬೆ' ಎಂದು ಆಂ-ಬುತ್ತೆ ತುಂಬ ಗ-ದ್ಗದಿತ ಕಂಠ ತೆರೆಸಿ ॥೩೮॥

ಕುಣಿದು ಗೋಪಿಯರು ಕೃಷ್ಣಗುಣಕಥಾ ಅಮೃತಸಾರ ಬೆರೆಸಿ
ಹಾಡ ಹಾಡುವುದು ನಿನ್ನ ಕಿವಿಸರಣಿ-ಗಿಳಿಯೆ, ಕುಣಿತ ನಡೆಸಿ ॥
ಅಲುಗಲವರ ಘನ-ಮೊಲೆಗೆ ಕೃಷ್ಣ ಗೀ-ರಿದ್ದ ಉಗುರ ಗುರುತು
ಬೆಟ್ಟವೇರಿ ಕುಣಿ-ಕುಣಿವ ಬಿದಿಗೆ ಚಂ-ದಿರನೊ ಏನು ಗೊತ್ತು? ॥೩೯॥

ಕೃಷ್ಣ ಹೆಜ್ಜೆ ಮೂ-ಡಿದ್ದ ನೆಲಕೆ ನೋ-ಡುತ್ತ ಒತ್ತಿ ಮುತ್ತು
ನೀಲಧೂಳ ಕೆಳ-ತುಟಿಗೆ ಬಳಿದು, ಗೋಪಿಯರು ಮೈಯ ಮರೆತು ॥
ಶೋಕದಿಂದ ಬಿಸಿ-ಉಸಿರು ಬಿಡಲು ತೋ-ರುವುದೊ ಹೃದಯದೊಳಗೆ
ಉರಿವ ಕೃಷ್ಣವಿರ-ಹಾಗ್ನಿ ಗೆದ್ದ ಹೊಗೆ ವಾಂತಿಗೈವ ಹಾಗೆ ॥೪೦॥

ಮುಕ್ತ ಮಾಲೆ ತುದಿ-ಮೊಲೆಯ ಬಿಡದೆ ಮೈ-ಗೆಲ್ಲ ತನ್ನ ಬಿಳುಪು
ಕೊಟ್ಟು, ನಿಟ್ಟುಸಿರು ಬಡಿದು, ಬಿಸಿಗೊಂಡು ಪಡೆಯೆ ಕಾಡುಗಪ್ಪು ॥
ತೊಳೆಯಲೀ ಕರಿಯ, ನೀರಧಾರೆ ಹರಿ-ಸುವುದೊ ಕಂಗಳೆರಡು
ನಿತ್ಯ ಗೋಪಿಕೆಯ-ರಲ್ಲಿ ವಿರಹ ನಡೆ-ಸಿರುವ ಆಟ ನೋಡು ॥೪೧॥

ಕೆನ್ನೆ ಮೇಲೆ ಕ-ಣ್ಣೀರಿನೊಡನೆ ಸೆಣ-ಸಾಟ ಬೆವರಿಗಂತೆ
ನಡುಕದಲ್ಲಿ ತುದಿ-ಮೊಲೆಗು ಮತ್ತೆ ತುಟಿ-ಹೃದಯದೊಡನೆ ಅಂತೆ ॥
ತೆಳ್ಳ ತೋಳ್‌ಬಿಸಗ-ಉದರದೊಡನೆ ಸೆಣ-ಸಿದರು, ಸೊರಗುವಲ್ಲಿ
ಗೋಪಿ ಮಾತ್ರ ಸೆಣ-ಸುವುದೆ ಇಲ್ಲ ಮೃಗ-ನಯನೆಯೊಡನೆ ಅಲ್ಲಿ ॥೪೨॥

ಹಾವೊ-ಹಾರವೊ, ಮಲಯಮಾರುತವೊ – ಕಾಲಕೂಟವಿಷವೊ,
ರವಿಯೊ-ಶಶಿಯೊ, ಪರಿ-ಮಳವನೀವ ಲಾ-ವಂಚ – ವಾಯುಸಖವೊ! ॥
ಬದುಕೊ-ಸಾವೊ, ಸಮ-ವೆಣಿಸಿ ಎಲ್ಲ, ದಿನ-ತಳ್ಳುತಿರಲು ಅಲ್ಲಿ
ರಕ್ತ ಗೋಪಿಯೆ ವಿ-ರಕ್ತಳೆಂದು, ನೀ ಕಾಂಬೆ ಕಂಗಳಲ್ಲಿ ॥೪೩॥

ಹೆರಳ ತುರುಬು ಕ-ಟ್ಟಿಡಲು ನೆರಿಗೆ ಗಂ-ಟಾಕಿ ಬಿಗಿಯಲೆಂದು
ನೆಂದ ಕೆಳತುಟಿಗೆ ವೀಳ್ಯಗುರುತು ಹಸಿ ಆ-ಗಿಸಿರಲು ಮುಂದೂ ॥
ದುಂಡುಮೊಲೆಗೆ ಚಂ-ದನವ ಲೇಪಿಸಲು, ಹೊರಟ ಗೋಪಿಗಂತು
ಕನಸು ಮುಗಿದರೂ, ಕೃಷ್ಣಸಿಕ್ಕಿರುವ ಹುಚ್ಚು ಮುಗಿಯದಿಂತು ॥೪೪॥

ಕಮಲ ಮುಖವ ರೋ-ಮಾಂಚಗೊಂಡ ಕೈ-ಗಿಟ್ಟು, ಹೆಗಲಮೈಗೆ
ಕೆದರಿ ಬೀಳೆ, ವಾ-ಸನೆಯ ಕುರುಳು, ಬಿಗಿ-ಯುತ್ತ ತೊಡೆಯ ತೊಡೆಗೆ ॥
ಕೃಷ್ಣನಪ್ಪಿ ಕನ-ಸಲ್ಲಿ ಗೋಪಿಯರು ಖುಷಿಸುವಾಗ ನೀನು
ಬೆಳಗುಜಾವ ಹಾ-ಡಿದರೆ ಸಿಡುಸಿಡುಕಿ, ಬೈದೆ ಬಿಡುವರೇನು ? ॥೪೫॥

ಒಂದೆ ರಾತ್ರಿ ವಿ-ಶ್ರಾಂತಿಗಾಗಿ ನೀ ಅಲ್ಲಿ ವಸತಿಮಾಡೊ
ಅದರ ಬಳಿಯೆ ಹೊಳೆ-ಅರಸಿ ಯಮುನೆ ಮೆರೆ-ದಿಹಳೊ ಅತ್ತ ನೋಡೊ ॥
ನೀರಜಂತುಗಳ ಚಲನವಲನ ಎ-ಬ್ಬಿಸಿದ ಬಿಂದು ಜಾಲ
ಮುಗಿಲ ತುಂಬ ನ-ಕ್ಷತ್ರಪುಂಜವೊಲು ಹೊಳೆವುದಂತೆ ಬಹಳ ॥೪೬॥

ಜಗಟದಿ ನದಿಗಳಿರ-ಬಹುದು ಬಹಳ, ಆ-ರಿಸಲು ಕಲುಷ ಕಿಚ್ಚು
ಅವುಗಳಲ್ಲಿ ನನ-ಗಂತು ಈ ನದಿಯೆ ಹೆಚ್ಚು ಅಚ್ಚುಮೆಚ್ಚು ॥
ಕಲಕುವಂತೆ ಕುಲ-ಸತಿಯ ಹೃದಯ, ಹರಿ-ಗೈದ ರಾಸಲೀಲೆ
ಮುಗ್ಧಗೋಪಿಯರಿ-ಗೊಲಿಯಿತಲ್ಲವೇ ! ಇದರ ತೀರದಲ್ಲೇ ॥೪೭॥

ಯಾವ ಯಾವ ಭಾ-ವನೆಯೊ ಒಳಗೆ, ಗಳಿ-ಸುವನೊ ಯೋಗಿ ಆ -ಆ
ಭಾವವನೆ, ಎಂದು ವೇದ ಆಗಮದಿ ಶಾಸ್ತ್ರಕಾರರೆಲ್ಲಾ ॥
ಹೇಳುತಿರಲು, ಈ ಹೆಣ್ಣುಮಗಳು ಸಾಧಿಸಿಯೆ ಬಿಟ್ಟಳಂತೆ
ನೋಡೊ ಪೂಜ್ಯ! ಆ ಕೃಷ್ಣ ಸನಿಹಕೇ ಇವಳೆ ಕೃಷ್ಣೆಯಂತೆ ॥೪೮॥

ಕೃಷ್ಣ ಹಿಡಿವ ಕೀ-ಟಲೆಗೆ ತಮ್ಮ ಹಿಂ-ಬಾಲಿಸಿರಲು ಬೇಗ
ತೋಳು ಬಾಚಿ ಸ-ಪ್ಪಳವೆ ಹೆಚ್ಚಿ ಎದೆ-ಹಚ್ಚಿ ಈಜುವಾಗ ॥
ಅಲೆಯ ಸೆಲೆಗೆ ಮೇ-ಲಾಗೆ ಲಂಗ ಅಂ-ಡುಲಗಿ ಡೇಕಿಸಿರಲು
ರತಿಯ ತಲೆಕೆಳಗೆ ಬಯಸುವಂತೆ ಗೋಪಿಯರು ತೋರ್ದರಿಲ್ಲೂ ॥೪೯॥

ನೀರಧಾರೆ ಹೂ-ಹಾರ ಹಾಕಿ, ಎದೆ-ಗೊತ್ತಿ, ನಗುತ ಬಂದ
ಅಂತರಂಗದಂ-ಗಳದಿ ನಿಂದ ಕೃ-ಷ್ಣಂಗೆ ಗೋಪಿವೃಂದ ॥
ಅರಳ ಹಾಗೆ ಹನಿ-ಮುತ್ತು ಎರಚಿ ಕರ-ಕಮಲದಿಂದ ಮತ್ತೆ
ಬಯಸಿ ಇಟ್ಟ ಮೀ-ನಾಕ್ಷಿ ನೋಟ, ಹೂ-ಮಳೆಯೆ ಆಯಿತಂತೆ ॥೫೦॥

ಕಾಮಕೇಳಿ ನಡೆ-ಸಿದನೊ ಬಿಡದೆ ಹರಿ, ಯಾರ ತೀರದಲ್ಲೇ
ಯಾರಿಗಾಗೆ ತಪ-ಗೈದರೂ ಸಿಗದ ರೂಪಕೊಟ್ಟನಲ್ಲೇ ॥
ಅಂಥ ಈ ನದಿಗೆ ಕಾಲುಹಲ್ಲು ಹು-ಟ್ಟಿಸಿದ ನದಿಗಳೇನು?
ಕೊಂಚವಾದರೂ ಸಾಟಿಎಂತು? ಬಾ-ನಿಂದ ಬಂದರೂನು! ॥೫೧॥

ಯಮುನೆ ಸನಿಹ ಗೋ-ವರ್ಧನಾದ್ರಿ ನೋಡಯ್ಯ ಕಣ್ಣಿಗಬ್ಬ
ಹೂವಿನಂತೆ ಜಡಿ-ಮಳೆಗು ಪುಳಕಗೊಂ-ಡಿರುವ ಅದನೆ ತುಂಬ ॥
ಕೃಷ್ಣ ಕರದಿ ಚೆಂ-ಡಂತೆ, ಕಾಡ ಮೃಗ-ನಯನೆದಂಡು ಕಂಡು,
ನೋಡಿತೊಡನೆ ತೊ-ಟ್ಟಲಗಿಸಿರುವ ಮೊಲೆ-ಯನ್ನೆ ಚಕಿತಗೊಂಡು ॥೫೨॥

ಕೇಳಿ ಕೊಳಲ ಸ್ವರ-ಮಧುರ ಆಲಾಪ-ತಾನ ಗೀತ ನಾದ,
ತನ್ನ ಪತಿಯ ಬಿಗಿ-ಅಪ್ಪುಗೆಯ ಸುಖ ತೊರೆದು ಓಡಿ ಬಂದ ॥
ಗೋಪಿವೃಂದ ಹರಿ ಕೊರಳ ಸುತ್ತ ಜಡೆ ನೋಡಿ, ತಿಳಿಯಿತಂತೆ
ಅಚ್ಚುಮೆಚ್ಚು ತಾ-ಣಕ್ಕೆ ನಾಗಿಣಿಯು ಹೊಕ್ಕು ಬರಿದಂತೆ ॥೫೩.॥

'ಹರಿಯ ಅಧರ ಸುಧೆ ಸವಿದು ಸುಖಹರಿದು ಕೊಳಲು ಕೂಗುತಿಹುದು'
ಎಂದೆ ತಿಳಿದು ಅವ-ಸರದಿ ಗೋಪಿಯರು ಹೊಟ್ಟೆಕಿಚ್ಚು ಉರಿದು ॥
ನೋಟ ಬೀರಿ, ಕ-ಣ್ಣರಳಿ, ಕಮಲಕರ-ದಿಂದ ಮುರಳಿ ತಳ್ಳಿ,
ಮಧುರ ಅಧರ ಸೀ-ತ್ಕರಿಸಿ, ಮುತ್ತಿದರು ಕಣ್ಣು ಮುಚ್ಚಿ ಅಲ್ಲಿ ॥೫೪॥

ಯಮುನೆ ದಾಟಿದರೆ, ಭೋಜ ವೃಷ್ಣಿ ಅಂ-ಧಕರೆ ಇದ್ದ ಮಧುರೆ
ನಿನ್ನ ಕಣ್ಣಬದಿ-ಗಿಳಿವುದೊಳಗೆ ಭಣ-ಭಣವೊ ಇದ್ದು ಜನರೆ ॥
ಕಂಸವೈರಿ ಹು-ಟ್ಟೂರ ಸುತ್ತ ನೀ ನೋಡು, ಹೊರಗೆ ಬಂದು
ಮಗಧ ಕುವರಿ ಕ-ಣ್ಣೀರಿಗಾದ ಕಂ-ದಕವು ಒಣಗದೆಂದೂ ॥೫೫॥

ನಡೆಯೊ ನಿಲ್ಲದೇ ಜನುಮ ಜನುಮದಾ ಪುಣ್ಯದಿಂದ ಕಾಂಬ
ದಿಸೆಗು ದಿಸೆಗು ಆ-ನರ್ತವೆಂಬ ತ-ನ್ನೆಸರುಗಳಿಸಿಕೊಂಬ ॥
ನಾಡ ನೋಡುವಿಯೊ, ಅದರ ನಡು ನಡುವೆ ಗಗನ ಚುಂಬಿ ರೆಂಬೆ
ತುಂಬ ಹೂ ಬಿಡುವ ಮರದ ಬನವೆ ಬಾ-ವುಟವು ಎಂದು ಅಂಬೆ ॥೫೬॥

ಪಯಣಿಗರ ಪರಿ-ತಾಪ ಕಳೆವ ಪರಿ-ಮಳದ ತಂಪುಗಾಳಿ,
ಕೋಮಲಾಂಗಿ ಕಾ-ಮಿನಿಯ ಹಾಗೆ ನೆಲ ತಾಕೆ ಹೃದಯ ಕಳ್ಳಿ ॥
ಬೆಂಕಿ-ಬೆಳಕು ಬೆಳ-ದಿಂಗಳಾಗೆ, ನೀರೆಲ್ಲ ಅಲ್ಲಿ ಅಮೃತ,
ಬಾನು ಕಂತಣಿಸೆ, ಪಂಚಭೂತ ಹೆದ-ರಿಸದೊ ಹರ್ಷದಾತ ॥೫೭॥

ಆತ್ಮತೃಪ್ತಿ ಮುನಿ-ವಸತಿಗೈವ ಆ-ಶ್ರಮವ ಕಾಂಬೆ ಅಲ್ಲಿ
ತಾಪಸಿಯರ ಮೈ ಮುಟ್ಟಲೆಂದು ಕೈ ಚಾಚಿ ಕಿರಣ ಚೆಲ್ಲಿ ॥
ಕಷ್ಟಪಟ್ಟರೂ ಸಿಗದೆ, ಅರುಣ ಒಳ-ಗಿಳಿವ ಕಿಂಡಿಯೊಂದು
ಹುಡುಕುತಾನೊ ಹೆ-ಮ್ಮರದ ಬಳ್ಳಿಚಿಗು-ರೊಳಗೆ ನುಸುಳಲೆಂದು ॥೫೮॥

ಕುರುಳ ಜಗ್ಗಾಟ ಸುರತದಲ್ಲೆ ಜಗ-ಳಾಟದಲ್ಲಿ ಇಲ್ಲ
ಗಡಸು ದುಂಡು ಹೆ-ಮ್ಮೊಲೆಗೆ ಮಾತ್ರ ಜನ ಮನಕೆ ಗೊತ್ತೆ ಇಲ್ಲ ॥
ಚಿಂತೆ ಶಾಸ್ತ್ರದಲಿ, ಹೊಟ್ಟೆಗಿಲ್ಲ, ಐ-ಸಿರಿಯೆ ತುಂಬಿ ತುಳುಕೆ
ಅಲ್ಲೆ ಜಗದ ಅಂ-ಗಡಿಗಳೆಲ್ಲ ನೀ ಕಾಂಬೆ ನಾಕವೇಕೆ ? ॥೫೯॥

ರವಿಯ ಮೀರ್ವ ತೇ-ಜಸ್ವಿ ಮಂತ್ರ ಪೂ-ತಾತ್ಮ ವಿಪ್ರರೊಡನೆ
ದಾರಿಗುಂಟ ವೈ-ದಿಕರೆ ಎಂದು ಗೆಳೆ-ತನವು ಬೆಳೆಯೆ ಸರನೆ ॥
ಶಾಸ್ತ್ರಚಿಂತನಿ ಪರಿಷ್ಕರಣಿ ವಾ-ಕ್ಯಾರ್ಥ ಸರಣಿಯೊಳಗ
ನೆನಪಹಾದಿ ಬಿಡ-ದಿರಲಿ ಎನ್ನ ಸಂ-ದೇಶ ವಿಪ್ರ ! ನಿನಗ ॥೬೦॥

ಧರಣಿ ರಮಣಿ ಬಲ-ಕಮಲಕೈಯ ಬಳೆ-ಯಂತೆ ಹೊಳೆಗಳೊಡೆಯ
ದ್ವಾರಕೇಯ ಕಂ-ದಕವೆ ಆಗಿ, ನಿನ-ಗಲ್ಲೆ ಕಾಂಬನಯ್ಯ ॥

ಕಡಲು ಹೊಡೆದ ಅಲೆ–ಗುರಳಿ ಬಿದ್ದಿರುವ ರತ್ನ ಮುತ್ತು ಹವಳ
ಸಾಲು ಸಾಲು ಮೆ–ಟ್ಟಲಿನ ಕಳೆಯೊ ಆ ದಡದಿ ನೋಡೊ ಬಹಳ ॥೬೧॥

ಬೇರೆ ದಾರಿ ಹೇ–ಳಿದೆನೊ ನಿನಗೆ, ಜನ–ತಿಳಿದ ಹಾದಿಗಿಂತ
ಕೇಳಿ ಕೇಳಿ ಮುನಿ–ವೃಂದದಿಂದ, ನಿಜ, ಇದುವೆ ಛಂದ ಅಂತ ॥
ಮತ್ತೆ ಗೊತ್ತಿರುವ ಹಾದಿಯಲ್ಲಿ ಶಿಶು–ಪಾಲ ರುಕ್ಮಿ ಬಂದು
ಗುಟ್ಟು ರಟ್ಟುಗೊಳಿ–ಸ್ಯಾರು ಎಂದು, ಅದು ಬೇಡೊ ! ವಿಪ್ರ ಬಂಧು ! ॥೬೨॥

ದೋಣಿ ಪಯಣ ಆ ಮುಂದೆ ಮಾಡೊ ಕಾ–ಣುವುದು ನಿನಗೆ ಬೇಗ
ಹೊಂದಬೇಕಿರುವ ಊರ ಮುಂದಿರುವ ದ್ವಾರಕೇಯ ಜಾಗ ।
ಹಾಡುವಾಪ್ಸರೆಯ ಕೂಡಿ ಸುರರ ಸಾ–ಲಾಗಿ ಮುಗಿಲಗಾಡಿ
ಪಡೆವುದಂತೆ ಆ ಊರ ಮೇಲೆ ಮೇ–ಲ್ಮಹಡಿಯಂತೆ ಮೋಡಿ ॥೬೩॥

ಇತಿ ಪೂರ್ವಸಂದೇಶ

ಶ್ರೀ

ಸಿರಿಯ ಸಿರಿ ಭಾಗ ಕಿತ್ತು ತಂದು ವೈಕುಂಠದಿಂದ ವಿಷ್ಣು
ಮುಕುತಿ ತಾಣ ತೋರಿಸುವ ನೆಪಕೆ ಜಗಕಿದನೆ ಇಟ್ಟನೇನು? ॥
ಊರಗೋಪುರದ ಮುತ್ತು ಚಿನ್ನ ಮೈಕಪ್ಪು ಒಪ್ಪಿ ಮೆರೆವ
ದ್ವಾರಕೆಯು ಚಂದ್ರ-ಬಿಂಬದಂತಿದೆಯೊ, ಕಡಲ ಮುಗಿಲ ನಡುವ ॥೧॥

ಉಕ್ಕು ಹೊಯಿದು ಬಂ-ಗಾರ ಬಳಿದು ಗಡು-ಸಾದ ವಜ್ರವೋಲು
ಮಾರುಗಟ್ಟಲೇ ಅಗಲ ಶಿಲೆಯ ಸು-ತ್ತೊರೆದ ಕೋಟೆಸಾಲು ॥
ಕಣ್ಣು ಸೆಳೆಯೆ ಆ ಕೃಷ್ಣನಗರಿ ತೋ-ರುವುದು ಹೆಣ್ಣಿನಂತೆ
ಹಳದಿ ಸೀರೆ ಧರಿ-ಸಿರುವ ದಿವಸ ತುಂ-ಬಿರುವ ಬಸರಿಯಂತೆ ॥೨॥

ಮುಗಿಲು ಮುಟ್ಟಿ ನಲಿ-ನಲಿವ ವಿಜಯ ಬಾ-ವುಟವು ಕೋಟೆ ಮೇಲೆ
ಅದರ ಕೋಲು ಬಂ-ಗಾರವಿರಲು ಮಿಂ-ಚಂತೆ ಹೊಳೆವುದಲ್ಲೆ॥
ಹರಿಯ ಬಲಕೆ ಹೆದ-ರುತ್ತ ವೈರಿಗಳ ಹೃದಯ ನಡುಗುವಂತೆ
ಧ್ವಜದ ಚಿತ್ರ ವಿ-ಚಿತ್ರ ರೂಪ ತಾ-ಳುತ್ತ ಚಲಿಸಿತಂತೆ ॥೩॥

ಚಿನ್ನ ತಂತಿ ಪೊ-ಣಿಸಿದ ಪಚ್ಚೆತೋ-ರಣಕೆ ಚೆಂದ ವಾದ
ಬಾಗಿಲೂರ ಬಾ-ಗಿಲಿಗೆ ನೀಡೊ, ಆತಿಥ್ಯ ಕಂಗಳಿಂದ ॥
ರೋಮಸಾಲು ಒ-ತ್ತಾಗಿ ಬಿಗಿದ ಕಣ್ ರೆಪ್ಪೆ ತೆರೆಯುವಂತೆ
ದ್ವಾರಪಾಲಕರು ದ್ವಾರ ತೆರೆಯುವರೊ ವೈರಿ ಎದುರಿಗಂತೆ ॥೪॥

ಎರಡು ಬದಿಗು ಒ-ತ್ತಾಗಿ ಹರಡಿ ಹೂ-ಬಿಟ್ಟ ಬಳ್ಳಿಗೂಡಿ
ಮರಗಳಿರಲು ಪರಿ-ಮಳವು ಬರಲು ಕ-ನ್ನಡಿಯ ಮೋಡಿ ಮಾಡಿ ॥
ಹೊಳೆವ ಹಾದಿ, ತುದಿ-ಗುಂಗುರಾಗಿ ಜಾರಿ-ರುವ ಕುರುಳ ನಡುವ
ಹೂವ ಮುಡಿದ ನವ ವಧುವಿನುದ್ದ ಬೈ-ತಲೆಯ ಹಾಗೆ ಚೆಲುವ ॥೫॥

ಎಲ್ಲ ಕಡೆಗು ಹೂ-ಗಿಡಕೆ ಬಹಳ ಕೈ-ತೋಟ ಸೊಗಸು ಗಳಿಸೆ
ಹೂಗಳರಳಿ ವನ-ಸಿರಿಯು ನಗುವ ಬಗೆ ಸೊಬಗು ತುಂಬಿ ಹರಿಸೆ ॥
ಬರುವ ಯುವ ಜನರ ಹೃದಯ ಚುಚ್ಚುವಾ ಕಾಮ ಬಿಲ್ಲಿನಲ್ಲಿ
ಹೂವೆ ಬಾಣ ಟಂ-ಕಾರ ದುಂಬಿಗುಂ-ಗಾಟವಂತೆ ಅಲ್ಲಿ ॥೬॥

ನೋಡೊ ಆ ನಡುವೆ ನೇರ ಅಗಲ ಆ ಊರ ರಾಜಮಾರ್ಗ
ಹೋಗಿ ಬರಲು ಅಡೆ-ತಡೆಗಳಿರದು ಬರ-ದುಬ್ಬುತಗ್ಗು ವರ್ಗ ॥
ಅಲ್ಲಿ ಚಲುವಿಯರ ಕೊರಳ ಮಾಲೆ ತಾ-ಕಿಸಲು ಆಗದಂತೆ
ಪಡ್ಡೆ ಹುಡುಗರಿಗು ಏನು ಕೀಟಲೆಗು ಜಾಗವಾಗದಂತೆ ॥೭॥

ದಂಡ ನಾಯಕಗೆ ಅಚ್ಚುಮೆಚ್ಚು ಸೈ-ನಿಕಗೆ ಸ್ವರ್ಗ ಹುಚ್ಚು
ಹೆಚ್ಚಿಸಿರುವ ಕಾ-ಳಗದ ಶಾಲೆ ಸಾ-ಗಿರಲು ಸಿಗುವುದ್ಧೆಚ್ಚು ॥
ನೋಡಿ ಹೇಡಿಯೂ ಪುಳಕಗೊಂಡು ಮೈ-ಯುಬ್ಬಿಸುತ್ತ ಅತ್ತ
ವೀರಘೋಷ ಝೋ-ರಾಗಿ ಮಾಡುವನು ಬಹಳ ಗಟ್ಟಿಸುತ್ತ ॥೮॥

ಕೊಂಚ ನಡೆಯೊ, ಗಜ-ಶಾಲೆ ನೋಡೊ, ಹೆ-ಜ್ಜೇನು ಗುಂಪುಗೂಡಿ
ಗುಂಜನದ ಗಲಭೆ ತುಂಬಿಸುವುದೊ ಮದ-ರಸದ ಗಂಧ ಹರಡಿ ॥
ಅಲ್ಲಿ ಕರಿಮಣಿಯ ಕಳೆಯ ಆನೆಗಳ ಹೊಳೆವ ದಂತವೆಲ್ಲ
ಮೋಡ ಕವಿದ ಕಡು-ಮುಗಿಲ ನಡುವೆ ಶಶಿ-ಕಲೆಗಳಾಯಿತಲ್ಲ ॥೯॥

ಅಲ್ಲೆ ನಿನ್ನ ಕುಡಿ-ನೋಟದಾರಿಯೊಳ-ಗಿಳಿವುದಯ್ಯ ಮುಂದೆ
ಕೆನೆವ ಕುದುರೆ ಕೊ-ಟ್ಟಿಗೆಯು ದಿಸೆ ದಿಸೆಗು ಹರಟುವಂತೆ ಒಂದೇ ॥
ನಡುವೆ ನೋಡು, ಕಿವಿ ನಿಮಿಸಿ ಮೆರೆವ, ಎದೆ ಅಳತೆ ಸಿಗದೆ ಬೆಳೆವ
ವೇಗದಲ್ಲಿ ಬಿರು-ಗಾಳಿ ಸೋಲಿಸುವ ಕುಣಿವ ಅಶ್ವ ಕುಲವ ॥೧೦॥

ಮುಂದೆ ಗರಡಿ ಮನಿ, ಜಗದ ಜಟ್ಟಿಗಳ ಕುಸ್ತಿ ಕಸುವಿಗದುವೆ
ಚಿನ್ನಕೆಲ್ಲ ಒರೆಗಲ್ಲಿನಂತಿದೆಯೊ, ಚಿಕ್ಕ ಚೊಕ್ಕ ಕಣಿವೆ ॥
ಅಲ್ಲಿ ವ್ಯಾಯಾಮ-ಕೆದ್ದ ಬೆವರ ಹನಿ-ಧಾರೆ ದೇಹದಲ್ಲಿ
ಸೀಳುಮುತ್ತಿನೊಲು ಹೊಳೆವ ಝರಿಯ ಹೋ-ಲುವುದೊ ಬೆಟ್ಟದಲ್ಲಿ ॥೧೧॥

ಮತ್ತೆ ನೃತ್ಯ ಸಂ-ಗೀತ ಶಾಲೆ ಇದೆ, ಅಲ್ಲೆ ಹತ್ತಿರಕ್ಕೆ
ಕೇಳುಗರ ಹೃದಯ ಕಂಪಿಸುವುದೊ ಸಂ-ಗೀತ ಕಂಪನಕ್ಕೆ ॥
ಹಾವ ಭಾವದಿಂ ತರುಣಿ ಕುಣಿಯೆ, ಎದೆ ಉಬ್ಬಿ ಹಿಗ್ಗಿಸುತ್ತ
ನೋಡುಗರ ಅಂತ-ರಂಗ ಕುಣಿವುದೋ, ಮೈಯ ಮರೆಯಿಸುತ್ತ ॥೧೨॥

ಉಚ್ಚ ಸಾಮ ಗಾ-ಯನವು ತುಂಬಿರುವ ವಿಪ್ರ ಅಗ್ರಹಾರ
ಮಾತುಮಾತಿಗೂ ಅಲ್ಲಿ ಶಾಸ್ತ್ರ ವಾ-ಕ್ಯಾರ್ಥಸದ್ವಿಚಾರ ॥
ಕುಡಿದ ತುಪ್ಪ ಅರ-ಗದಿರೆ ಉಮ್ಮಳಿಸಿ ಅಗ್ನಿಗಾದ ವಾಂತಿ
ಧೂಮವಾಗಿ ಚಂ-ದಿರನ ಮುಖಕೆ ಮಸಿ ಬಳಿತೆ ? ಏನು ಅಂತಿ ? ॥೧೩॥

ವನದ ಸಾಲು ಕರ-ವೆಣ್ಣ್ನೋಲು ಸೊಬ-ಗಿಸಲು ಹೊಸತು ಹೊಸತು
ಬರಲು ಚಲುವಿಯರು, ಹಾದಿಯಲ್ಲಿ ಅ-ಲ್ಲಲ್ಲಿ ನಿಂತು ನಿಂತು ॥
ಅವರ ಗಟ್ಟಿ ಮೊಲೆ ಮುಟ್ಟಿ ಸವರಿ ಕೈ-ಯಂತೆ ಗಾಳಿಯಿರಲು
ದ್ವಾರಕೇಯ ಸಾ-ಮ್ರಾಟನಂತೆ ಮ-ನ್ಮಥನೆ ಮೆರೆವ ಅಲ್ಲೊ ॥೧೪॥

ತಿಗುರು ಬೆರೆತ ಹನಿ-ಬೆವರು ಮುತ್ತು ಚೆ-ಲ್ಲುತ್ತ ದುಂಡು ಮೊಲೆಯ
ಡಿಕ್ಕಿ ಇಕ್ಕಿ ವ-ಲ್ಲಭನ ಅಗಲ ಎದೆ-ಗಪ್ಪಿ ಒಪ್ಪಿ ಹೃದಯ ॥

ಹರಡಿ ಬಿದ್ದ ಹಿಂ-ಗುರುಳ ಬೀಸಿ, ಬಾ-ಯಾರಿ ಬಳಲಿ, ಅಲ್ಲಿ
ಅವನ ತುಟಿಯ ಸಿಹಿ ಹೀರಿ ಹೀರಿ, ಖುಷಿ ಖುಷಿಯೊ ಹೆಂಗಳಲ್ಲಿ ॥೧೫॥

ಕಾಲು ಕುಣಿದ ರಭ-ಸಕ್ಕೆ ಟೊಂಕ ಬಿ-ಟ್ಟಿರಲು ನೆರಿಗೆ ಗಂಟು
ಸೆರಗು ಉಸಿರ ತಾ-ಕಾಟ ತಾಳದಲೆ ಬಿಡಲು ಎದೆಯ ನಂಟು ॥
ಕಾಮಿನಿಯರು ಜೋ-ಕಾಲಿ ಏರಿ ನಲಿ-ದಾಡೆ ಮೇಲೆ ಕೆಳಗೆ
ತಿರುಗು ಮುರುಗು ಸಂ-ಭೋಗವೆಂದು ತಳ-ಮಳವೊ ತರುಣರೊಳಗೆ ॥೧೬॥

ನೀರು ನಿರ್ಮಲತೆ ಗಳಿಸಿ ತೋರುವುದು, ಯೋಗಿ ಮನಸಿನಂತೆ
ತಾಕೆ ಮೈಪುಳಕ-ಗೊಳಿಸಿ ತೊರುವಳು, ನಾರಿ ನೀರಿನಂತೆ ॥
ಮೆಲ್ಲ ಮೆಲ್ಲನಡಿ-ಇಡಲು ತೋರುವುದೊ, ಹಂಸ ನಾರಿಯಂತೆ
ಬೆಳ್ಳ ಹೊಳಪಿಗಾ ನಾರಿ ಕಿರುನಗೆಯೆ ಅಲ್ಲಿ ಹಂಸವಂತೆ ॥೧೭॥

ದುಂಡು ಮೊಲೆಯಂಥ ಚೆಂಡುಹಿಡಿದು ಹೂ-ಗೊಂಚಲಾಡಿಸುತ್ತ
ನೆರಿಗೆ ಗಂಟು ಸಡ-ಲಿಸುತ, ಕಣ್ಣು ಸೆಳೆ-ಯುತ್ತ , ಸೊಬಗ ಪೊತ್ತ ॥
ಸುಂದರಿಯರ ಉಸಿ-ರಾಟದೇಟಿಗಲು-ಗಾಡೆ ತೊಟ್ಟು , ಮೊಲೆಯ
ಮುಟ್ಟಿ ಮುಟ್ಟಿ ತಂ-ಗಾಳಿ ವಿಟರ ಕೈ-ಯಂತೆ ತೋರ್ವನಯ್ಯ ॥೧೮॥

"ಕಳೆಯಲಾರ ಬೆಂ-ಗದಿರ ತಂಗದಿರ ನಮ್ಮ ಛಳಿಯನಿಂದು
ಮೈಗೆ ಮುತ್ತಿರುವ ಕೊರೆತ ಬೆಂಕಿ ಹುಸಿ-ಬಿಸಿಗೆ ಹೋಗದೆಂ"ದು ॥
ಯೋಚಿಸುತ್ತ ಕಾ-ಮುಕರು ಕಾಮಿನಿಯ-ರನ್ನೆ ನೋಡಿ ನೋಡಿ
ಗಡಸು ಎದೆಯ ಬಿಸಿ ಬಯಸಿ ಶರಣು ಹೊ-ಕ್ಕುವರೊ ಕಾಡಿ ಬೇಡಿ ॥೧೯॥

ಸೊಟ್ಟು ಬಿಟ್ಟು ನೆ-ಟ್ಟಿರುವ ನೋಟ, ಹುಬ್ಬಾಟಕಿಲ್ಲ ಮಾಟ,
ಅಸ್ತ ವೆಸ್ತ ಮೈ ಉಡುಪು ಒಲುಪು, ನಗೆಯಂತು ಕೃತಕ ಕಪಟ ॥
ಅಲ್ಲಿ ಎಲ್ಲ ಕಡೆ, ತಗ್ಗಿ ಬಗ್ಗಿ ನೆರ-ಳಂತೆ ಮತ್ತೆ ಮತ್ತೆ
ಸಾರಸಾಕ್ಷಿಯರ ಹಿಂದೆ ಬಿದ್ದಿರುವು-ದಂತೆ ತರುಣಜನತೆ ॥೨೦॥

ದ್ವಾರಕೆಯ ಬೆಡಗು ನೋಡಿ ನೋಡಿ, ಬಿಡ-ದಂತೆ ಎಲ್ಲ ಕಡೆಗೂ
ಮುಂದೆ ಸಾಗು ಹರಿ-ಯಿಂದೆ ಸೊಬಗು ಹೊಂ-ದಿರುವ ರಾಜಸಭೆಗೂ ॥
ಸುರರು ಆ ಸಭೆಗೆ ಹೊಕ್ಕಲೆಂದು, ಬಹುಕಾಲ ಬಾಗಿಲಲ್ಲೇ
ಕಾದು ಕಾದು ಕೈ ಜೋಡಿಸುತ್ತ ಅನಿ-ಮಿಷರೆ ಆದರಲ್ಲೆ ॥೨೧॥

ಬ್ರಹ್ಮ ತೇಜ ಮೈ-ವೆತ್ತಿ ಬಂದ ಹರಿ-ಭಕ್ತನಾದ ನಿನ್ನ
ನೋಡಿದೊಡನೆ ಮೈ-ಮಣಿಸಿ ದೂತಜನ ಸಭೆಗೆ ಕರೆಯೆ, ಮುನ್ನ ॥
ಸ್ಫಟಿಕ ರತ್ನ ಮಣಿ ಕಿರಣ ಹರಡಿ ತುಂ-ಬಿರುವ ಅಂಗಳಕ್ಕೆ
ಸಭೆಯ ಛಾಯೆ ಕಂ-ಡೀತೊ ಒಡನೆ ಕೆಳ-ಗಿಳಿಯಬೇಡ ಜೋಕೆ ॥೨೨॥

ಮೆಲ್ಲ ಮೆಲ್ಲ ಒಳ ಹೋಗು, ಸೇವಕರು ಕರೆದು ಒಯ್ಯುವಂತೆ
ಅಲ್ಲಿ ಯಾದವರ ದೊರೆಯ ಓಲಗವು ನಿತ್ಯ ನಡೆವುದಂತೆ ॥
ಎರಡು ಬದಿಗು ಆ-ಸನದಿ ಕುಳಿತ ಸಾ-ಮಂತ ದೊರೆಗಳನ್ನು
ರನ್ನ ಗಿರಿಯೊಳಗೆ ಚಿನ್ನ ಶಿಖರವಿ-ಟ್ಟಂತೆ ನೋಡೊ ನೀನು ॥೨೩॥

ಜಗದ ಜಟ್ಟಿಗಳ ಜುಟ್ಟು ಹಿಡಿವ ಬಲ-ರಾಮ ಅಲ್ಲಿ ಹಿರಿಯ
ರನ್ನ ಚಿನ್ನ ಮಣೆ-ಮೇಲೆ ಮಂಜುಗಿರಿ-ಯಂತೆ ಮೆರೆವನಯ್ಯ ॥
ಕಡಗದಂಥ ಕಡು-ಕೋಟೆ ಪಡೆದ ಕುರು-ರಾಜಧಾನಿ ಅವನ
ತೆರೆದ ನೇಗಿಲಿನ ಬಾಯಿಗಂತು ಮ-ಣ್ಣುಂಡೆ ಸರಿಸಮಾನ ॥೨೪॥

ಅವನ ಪಕ್ಕ ಹೊಳೆ-ಹೊಳೆವ ನಿನ್ನ ಆ ಕಣ್ಣ ಬೆಳಕು ಚೆಲ್ಲು
ಸುಖದ ಸುಧೆಯ ಸುರಿ-ಸಿರಲು ಚಂದ್ರನೋಲ್ ಅದುವೆ ದೂರದಲ್ಲೊ ॥
ಹೊಳೆವ ಸೆಳೆವ ಕಳೆ, ನೀಲ ಮಣಿಯ ಮಳೆ, ಶ್ರುತಿಯ ಗುಪ್ತ ನಿಧಿಯೊ
ಯೋಗಿಗಳಿಗು ಕಡು-ತಪದಿ ಕಾಣಿಸದ ಪ್ರಮುಖ ವಸ್ತು ಇದೆಯೊ ॥೨೫॥

ಬೂದಿಹೋಮ, ಹೊಳೆ-ಯಲ್ಲಿ ಹುಣಸೆ ಹ-ಣ್ಣಂತೆ ದಾನ ಧರ್ಮ,
ಅಡವಿ ರೋದನವೊ ವೇದವಾದ, ಬೊ-ಜ್ಜೆಳಿಸಲೆಲ್ಲ ಕರ್ಮ ॥
ಪುಣ್ಯತೀರ್ಥದಲಿ ಮೀವುದೆಲ್ಲ ಮ-ದ್ದಾನೆ ಮುದ್ದು ಜಳಕ
ಕೃಷ್ಣ ಎಂಬ ಶ್ರುತಿ-ಗಮ್ಯ ತೇಜದೊಳು ಭಕುತಿ ಇರದ ಜಗಕ ॥೨೬॥

ವೇದಗಳಿಗೆ ಹಾ-ಯಾದ ಅರಮನೆಯೊ, ರಾಣಿ ಮಹಡಿ ಸ್ಮೃತಿಗೆ
ಕಲುಷ ಕತ್ತಲೆಗೆ ಪ್ರಳಯ ರವಿಯೊ, ಪಾ-ಲ್ಗಡಲೋ ಸುಗುಣ ಮಣಿಗೆ ॥
ಕಾಲು ಹಿಡಿದವಗೆ ಕಲ್ಪತರುವೊ, ಜಗ-ಪದುಮ ಕಂತು ದೇಟು
ಕೃಷ್ಣ ಎಂಬ ತೇ-ಜಸ್ಸು ಆ ಸಭೆಯ ಬೆಳಗಿ ಹೊಳೆವುದುಂಟು ॥೨೭॥

ಯಾರು ಮನದಿ ಕುಣಿ-ತಾನೊ, ಪತ್ರ ಯಾ-ರನ್ನು ಸೇರಬೇಕೊ
ಬದುಕುವಾಸೆ ಯಾ-ರಿಂದ, ಯಾರ್ಗೆ ಸುಖ-ಸುಸಿಲ ಸಲ್ಲಬೇಕೊ ॥
ಯಾರಿಗಿಂತ ಮಿಗಿ-ಲಿಲ್ಲೊ, ಯಾರೊಲವು ಹುಟ್ಟುಗುಣವೊ ಎನಗೆ
ಯಾರೊಳೀಜಗವು ಮೆರೆವುದವನ ನೋ-ಡುವೆಯೊ ಸಭೆಯ ಒಳಗೆ ॥೨೮

ಸುರರು ನುತಿಸೆ ದೇ-ವಕಿಯ ಬಸಿರ ಸಿಂ-ಧುವಿಗೆ ಚಂದ್ರನಾಗಿ
ವಜ್ರದಿ ನೆಲೆಸೆ ಪೂ-ತನೆಯ ಮೈಯ ಬೆ-ಟ್ಟಕ್ಕೆ ವಜ್ರವಾಗಿ ॥
ಹತ್ತಿ ಎನಿಸೆ ಬಕ-ಮುಖರು, ಅಸುರಕುಲ ಸುಡಲು ಬೆಂಕಿಯಾಗಿ
ಕಂಸ ಗಜಮದಿಸೆ ಮೆರೆದನಾರು ಕೂ-ರುಗುರ ಸಿಂಹವಾಗಿ ॥೨೯॥

ಪೂರ್ಣಿಮೆಯ ಪೂರ್ಣ-ಚಂದ್ರನಂತೆ ನ-ಕ್ಷತ್ರ ಬಳಗದೊಳಗೆ
ರತ್ನಸಾಲು ಪೋ-ಣಿಸಿದ ಸರಕೆ ನಾ-ಯಕದ ಮಣಿಯ ಹಾಗೆ ॥

ಮೆರೆವನೋ ಹರಿಯು ಅರಸರೆಲ್ಲ ತುಂ-ಬಿರುವ ಸಭೆಯ ನಡುವೆ
ಕಿರಣಮಂಡಲದಿ ಕತ್ತಲೆಯ ದ-ಬ್ಬುತ್ತ ಸುತ್ತ ಅಲ್ವೆ ||೩.೦||

ಅರುಣ ಅಂಗಾಲ-ಕಮಲದೊಳಗೆ ಎಸೆ-ಳಾಗಿ ಕಣಗಳರಳಿ
ರತ್ನ ಖಚಿತ ಕಾ-ಲ್ಗಣೆಗೆ ಮೂಡುವುದೊ ಕೃಷ್ಣಪಾದಧೂಳಿ ||
ಇಂದಿಗೂ ವಿಧಿಯು ತನ್ನ ಹಣೆಗೆ ಅದ-ರಿಂದೆ ತಿಲಕವಿಡುವ
ದುಂಡು ಮೊಲೆಗೆ ಗೋ-ಪಿಯರು ಬಳಿದ ಚಂ-ದನವು ಇದುವೆ ಚೆಲುವ ||೩.೧||

ನೋಡೊ ಅಡಿಯ ಕೆಂ-ದಾವರೇಯ ಗೆರೆ-ಯಂತು ರೇಷ್ಮೆ ತಂತು
ವಜ್ರ ಅಬ್ಜ ಧ್ವಜ ಮೀನೆ ಆದಿ ಮೈ-ತಾಳಿ ಮೆರೆವುದಿಂತು ||
ಗೋಪಿಯರು ಎದೆಗೆ ಮೂಡಿದಾ ಗೆರೆಯ ಗುರುತ ಹುಡುಕಿ ನಲಿದು
ಮತ್ತೆ ಆ ಗುರುತ ಗೀರಿ ತೀಡುವರೊ ದುಂಡು ಮೊಲೆಗೆ ಇಂದೂ ||೩.೨||

ಹರುಷ ಅರಿವು ಹರ-ಸುತ್ತ ಮೆರೆಯುತಿದೆ, ಹರಿಯ ಚರಣ ಜೋಡಿ
ಗಂಗೆ ಮುದ್ದಿಸಿದ-ಳಂತೆ ಅದರ ಸಿಹಿ ಸವಿಯುವಾಸೆಗೂಡಿ ||
ಅದರ ಸಾಮ್ಯತೆಯ ಗಳಿಸಲೋಗಿ ನೀರಲ್ಲಿ ಬಿತ್ತೊ ಪದುಮ
ದೊಡ್ಡವರ ಸಾಮ್ಯ ಆಸೆ ಪಟ್ಟವಗೆ ಪತನ ವಿಧಿಯ ನಿಯಮ ||೩.೩||

ಕೃಷ್ಣಪಾದ ಕ-ನ್ನೈದಿಲೆಯ ತುದಿಗೆ ನಲಿವ ಉಗುರ ರೂಪ
ಹೃದಯ ಸೆಳೆಯೆ, ಕಂತಣಿಸೆ ಕಾಂತಿ, ಹುಣ್ಣಿಮೆಯ ಒಡೆಯನಪ್ಪ||
ಚರಣದಲ್ಲಿ ಹಣೆ-ಮಣಿದ ಸುರರ ಹರಿ-ನೀಲಮಣಿಯ ಮುಕುಟ
ಕೃಷ್ಣನಖಚಂದ್ರ-ನೊಳಗೆ ಗಳಿಸುವುದೊ ಕೃಷ್ಣಮೃಗದ ಪಟ್ಟ ||೩.೪||

ಎರಡು ದಳವುಳ್ಳ ಮುಕುತಿ ಗಂಡತಳ ಹದ್ದು ಬಸ್ತು ಇಡುವ
ದುಂಡು ಮೊಣಕಾಲು ಜೋಡಿ ಕೋಲ್ಜೋಡಿ-ಯಂತೆ ತೋರುತಾವ ||
ಕಷ್ಟಪಡದೆ ಇ-ಷ್ಟಾರ್ಥ ಸಿಕ್ಕು ಮ-ದ್ದಾನೆಯಂತೆ ಸೊಕ್ಕ
ಖಳರ ಕಟ್ಟಿಡಲು ಗೂಟವೆಂದು ಬೇ-ಡುವರೊ ಸುರರು ಅದಕ ||೩.೫||

ಎರಗಿ ಬೀಳುತಿಹ ತುಂಬು ತೊಡೆಗಳಾ ಬಹಳ ಭಾರದಿಂದ
ಬಳಲಿದಾಗ ಮೊಣ-ಕಾಲ್ಗೆ ನೆರವು ನೀ-ವಂತೆ ಉಬ್ಬಿ ಬಂದ ||
ಚೆಂದವಾಗಿ ದುಂ-ಡಾಗಿ ಕನ್ನಡಿಯ ಹಾಗೆ ಸೊಬ್ಬ ಹೊಳೆವ
ನೋಡು ಹರಿಯ ಕಾ-ಲ್ಮಂಡಿ ಜೋಡಿ ನೂ-ರಾರು ವಜ್ರ ಸಮವ ||೩.೬||

ಚಂದ್ರವಂಶ ಪಾ-ಲ್ಗಡಲ ಚಂದ್ರ ಆ ಹರಿಯ ತೊಡೆಯ ಜೊತೆಯು
ಬಾಳೆಕಂದು ಹೋ-ಲುತ್ತೊ , ಮತ್ತೆ ಹೂ-ಬಾಣ ಬತ್ತಳಿಕೆಯು ||
ಬಿಗಿದ ಅದರ ತಾ-ಕಾಟಕಾದ ಸುಖ-ಸುಧೆಯ ಕಡಲ, ಏರಿ-
ಮುಳುಗಿ ಮುಳುಗಿ , ಮೈ-ಮರೆತರಂತೆ ಗೋ-ಪಿಯರು ಹೊತ್ತು ಮೀರಿ ||೩.೭||

ವಾಡವಾಗ್ನಿ ಕಳೆ-ಗೂಡಿ ಕಡಲ ಜಲ-ದಂತೆ ಹರಿಯ ಟೊಂಕ
ಪೀತ ಅಂಬರದಿ ಸುತ್ತ ಸೇರಿ ಹೊಳೆ-ಯುತ್ತೊ ನಿಷ್ಕಳಂಕ ॥
ಮೋಡವೆಂದೆಣಿಸಿ ಕೃಷ್ಣಗೆರಗಿ ಕಿ-ಬ್ಬೊಟ್ಟೆ ಕಡಲ ಆಳ
ಆಳೆವ ಮಿಂಚುಗಳೆ ಪೀತಅಂಬರವು ಆಯಿತೇನೊ ಬಹಳ ॥೩೮॥

ಸಾಲು ಘಂಟೆ ಇಂ-ಪಾದ ಕಿಂಕಿಣಿಯ ಕಿಸಿಯೆ ದಿಸೆಯ ತುಂಬ
ಬೆಳಗಿಸುತ್ತ ಕಾಂ-ಚನದಿ ಸುತ್ತ ಜೋ-ತಾಡೆ ಮಣಿಯ ಬಿಂಬ ॥
ಡಾಬು ಹಿಡಿಯೆ ನಡು ನೋಡು, ಕಡಲ ಕಡ-ಗೋಲ ಗುಡ್ಡದಂತೆ
ರನ್ನ ಹೆಡೆಯ ಬು-ಸ್ಸಪ್ಪ ಅಪ್ಪಿರುವ ಮಂದರಾದ್ರಿಯಂತೆ ॥೩೯॥

ತಾವರೆಯ ತಿಗುರು ಬೀರಿ ಆ ಹರಿಯ ಆಳ ನಾಭಿ ಸುಳಿಯು
ಕಣ್ಣು ಸೆಳೆದು ತ-ಣ್ಣಿಸುವುದನ್ನು ಬ-ಣ್ಣಿಸಲು ಸಿಗದೊ ನುಡಿಯು ॥
ಅಲ್ಲೆ ಮುಳುಗಿ ಜಠ-ರಕ್ಕೆ ಹೋಗಿ ಸೃ-ಷ್ಟಿಸಲು ಅಂದುಕೊಂಡ
ಕಂಡು ಹಿಂಡು ಬೊ-ಮ್ಮಾಂಡ ದಂಡು ವಾ-ಗ್ಗಂಡ ಮೂಕಗೊಂಡ ॥೪೦॥

ಸುತ್ತ ಹೊಮ್ಮಿರುವ ಕೃಷ್ಣಪೊಗರು ತುಂ-ಬಿರುವ ನೀರು, ನಾಭಿ
ಚೆಲುವ ಸುಳಿಯು, ಅಲೆ-ಅಲೆಯು ತ್ರಿವಳಿಯೊಳು ರೋಮಸಾಲು ಉಬ್ಬಿ॥
ಚಿನ್ನದೊಡವೆ ಮಣಿ-ಮುತ್ತು , ನಡುವೆ ಕಳೆ-ಗೊಂಡ ವಾಡವಾಗ್ನಿ
ಮೃದುಲ ತೆಳ್ಳುದರ ಕಡಲಿನಂತೆ ಮ-ನ್ಮನದಿ ಕಾಣಿತೆನ್ನಿ ॥೪೧॥

ಜೇನುಗೂಡ ಬನ-ವನದ ಮಾಲೆ, ಸಿರಿ-ವತ್ಸ ಗುರುತು ಚಿಗುರು,
ಮುತ್ತು ಹಣ್ಣು ಮು-ತ್ತುಗದ ಹೂವು ಕೌ-ಸ್ತುಭದ ಕೆಂಪು ಪೊಗರು ॥
ತೋರ್ಪುದೆನಗೆ ಉ-ದ್ಯಾನದಂತೆ ಹರಿ-ಎದೆಯು, ಸಿಗಲು ಕಾಣೆ
ಬಯಕೆ ಬೇಸಿಗೆಯ ಬಿಸಿಗೆ ಬೆಂದ ಬಗೆ-ಬಿಗಿದ ಬೆಡಗಿ ಬವಣೆ ॥೪೨॥

ಶಂಖ ಚಕ್ರ ಗದೆ ಪದ್ಮ ಧರಿಸಿ ದುಂ-ಡಾದ ಚೆಲುವ ಧೀರ
ಚತುರ ತೋಳುಗಳು ಚತುರ ವರ್ಣವಿಧಿ ಎತ್ತುವಲ್ಲಿ ಚತುರ ॥
ನಾಕು ಪುರುಷಾರ್ಥ ಕಾಣದಿಹ ತನ್ನ ಭಕುತ ಜನಕೆ ನಾಕೂ
ನೀಡಲೊಮ್ಮೆಲೇ ಬದ್ಧಕಂಕಣವೊ ವಿಪ್ರ! ನೋಡಬೇಕು ॥೪೩॥

ಗೋಪಿಯರ ಹಾಗೆ ಕೌಸ್ತುಭ ಪ್ರಭೆಯು ಗಾಢವಾಗಿ ಅಪ್ಪಿ
ಮೆರೆದು ಶಂಖದೋಲ್ ಹರಿಯ ಕೊರಳು ಹೊಳೆ-ದಿಹುದು ತ್ರಿವಳಿ ಒಪ್ಪಿ ॥
ಅದರ ದನಿಗೆ ನೀ-ಲ್ಗೊರಳ ಹಕ್ಕಿ ಗರಿ-ಗೆದರಿ ಕುಣಿವುದಂತೆ
ಮತ್ತೆ ದಿಠಿಯು ಸಾ-ಕಿರುವ ನೀಲ್ಗೊರಳ-ಪಕ್ಷಿ ಕುಸಿವುದಂತೆ ॥೪೪॥

ಕಿವಿಗೆ ಜೋತ ಮಣಿ ಕಿರಣ ಬಳಿದ ಹರಿ ಚೆಲುವ ಮೋರೆಯಲ್ಲಿ
ನೇರ ಮೂಗು ಗಿಣಿ-ಮೂತಿಯಂತೆ, ಕಿರು-ನಗೆಯ ಬೆಳಕುಚೆಲ್ಲಿ ॥

ಅದರ ಬಿಂಬ ಜ್ಯಂ-ಭಿಸಿದೆ ಮತ್ತೆ ಕಿವಿ-ವರೆಗು ಕಣ್ಣು ಕಾಣೋ
ಕಮಲವೆಂದು ಭ್ರಮೆ-ಗೊಂಡು ದುಂಬಿ ಮುಂ-ಗುರುಳೆ ಆಯಿತೇನೋ ! ॥೪೫॥

ರವಿಯ ಸಾಲು ತು-ಂಬಿರಲು ಮುಗಿಲ ಬಲು ನೋಡಲಾಗದಂತೆ
ಮುಕುಟಕಿಟ್ಟ ಮಣಿ-ಕಳೆಗೆ ಹರಿಯ ದಿ-ಟ್ಟಿಸಲು ಆಗದಂತೆ ॥
ಶ್ರಾವಣದ ಮೋಡ-ವೆಂದು ಕುರುಳ ಕಂ-ಡೊಡನೆ ಬಿಡದೆ ಅಪ್ಪಿ
ತಮಸು ನುಂಗಿ ಮಿಂ-ಚುಗಳೆ ಮುಕುಟದಂ-ತಿದೆಯೊ ಅಪ್ಪಿತಪ್ಪಿ ॥೪೬॥

ಬಾಲಲೀಲೆಯಲಿ ಕಡಲ ತಳಮಳಿಸಿ ಬೆಳೆಸಿ ಅಲೆಯ ತಳ್ಳಿ
ನಲಿವ ಈ ಹರಿಯ ಮತ್ಸ್ಯ ರೂಪ ಧೇ-ನಿಸಲು ಹೊಳೆವುದಲ್ಲಿ ॥
ಅವನೆ ತನ್ನ ಮೈ ಮುರಿದು ನೀರೆದ್ದು ಕಡಲ ಮೋಡ ಮಾಡಿ
ಮೆರೆದನಂತೆ ಮ-ತ್ತೆಲ್ಲ ಕಡೆ ಹರಡಿ, ಮೋಡ ಕಡಲ ಮಾಡಿ ॥೪೭॥

ತಿರುಗಿ ಕಡೆವ ಮಂ-ದರವು ಉಜ್ಜುತಿರೆ, ಬೆನ್ನು ತುರಿಸುವಂತೆ
ಸುಖದಿ ಮಲಗಿ ಪಾ-ಲ್ಗಡಲ ನಡುಗಿಸಿತೊ ಕೂರ್ಮ ರೂಪವಂತೆ ॥
ಮೇಲೆ ಶೇಷ , ಪಾ-ತಾಲ ಭೂಮಿ ಸುರ-ಲೋಕ ಹೊತ್ತು ಮತ್ತೆ
ಮೆರೆವನಯ್ಯ ಬ್ರೊ-ಮ್ಹಾಂಡ ಧರಿಸಿ ಪೀ-ಯೂಷ ಕಲಶದಂತೆ ॥೪೮॥

ಶ್ರೀವರಾಹ ಕ-ನ್ನೀಲ ಮೇಘಕಳೆ-ಯಲ್ಲಿ ಹೊಳೆವನಲ್ಲಿ
ಸಕಲ ಸುರರು ಸೇ-ವಿಸಲು ಅವನ ಬಿಳಿ ಕೋರೆಹಲ್ಲಿನಲ್ಲಿ ॥
ಶೇಷ ದೇಟು, ದಿ-ಗ್ಗಜವು ಹತ್ತು ಹಸಿ-ರೆಲೆಯು, ಮೇರು ಮೊಗ್ಗು,
ಧರೆಯೆ ತಾವರೆಯು, ಬಾನು ಜೇನು ಮಂ-ಡಲವೊ, ನೋಡಿ ಹಿಗ್ಗು ॥೪೯॥

ಇವನೆ, ಅಸುರ ಹೆಂ-ಗಸರ ಬಸಿರು ಕುಸಿ-ವಂತೆ ಗರ್ಜಿಸುತ್ತ
ಕಂಭದಿಂದ ಕುಣಿ-ಯುತ್ತ ಬಂದು ನರ-ಸಿಂಹರೂಪ ಪೊತ್ತ ॥
ಇರುವರೆಷ್ಟು ? ಪ್ರ-ಹ್ಲಾದನಷ್ಟು ಹರಿ-ಭಕುತಮಣಿಗಳೆಂದು
ನಿಜವ ತಿಳಿಯಲವ, ಕನಕ ಕಶಿಪು ಒಡ-ಲನ್ನೆ ಬಗೆದನಂದು ॥೫೦॥

ಇವನೆ, ವಾಮನನು ಎಂಬ ಕಪಟ ವಟು-ವಾಗಿ ಇದ್ದ ಹಿಂದೆ
ಕುಮುದಕಣ್ಣ ಹೆಂ-ಗಳಿಗೆ ಮುದ್ದು ಮು-ದ್ದಾಗಿ ಕಂಡ ಅಂದೇ ॥
ಅವನ ಬೆಳೆವ, ಮುಗಿ-ಲನ್ನೆ ಅಳೆವ ಕಾ-ಲಿಂದ ಇಳಿದುಬಂದ
ದೇವನದಿಯು ಬಲಿ-ಜಯಕೆ ವಿಜಯ ಬಾ-ವುಟದ ಹಾಗೆ ಚೆಂದ ॥೫೧॥

ಇವನೆ ಬಂದ, ಕಡು-ತಪಸುಗೈದ ಭಾ-ರ್ಗವರ ವಂಶದಲ್ಲಿ
ಪರಶುರಾಮ ಎಂ-ದಾಗಿ ಮೆರೆದ ಮುಂ-ದಾಗಿ ವೀರರಲ್ಲಿ ॥
ಅರಸ ಕುಲ ಕಡಲ ಕುಡಿದ ಕೊಡದ ಕೂ-ಸಾದ ಅವನ ಕೊಡಲಿ
ಅರಸಿಕಣ್ಣಲಾ-ವಣ್ಯ ಬೆರೆಸಿ, ಬಿಸಿ-ಕಡಲ ತರಿಸಿತಲ್ಲಿ ॥೫೨॥

ಇವನೆ, ದಶರಥನ ಪುಣ್ಯವೆಲ್ಲ ಮೈ-ತಾಳಿ ರಾಮನಾಗಿ
ಕೊಂದು ರಕ್ಕಸರ, ಇಳೆಯ ಆಳಿದನೊ ಸತ್ಯ ಸಂಧನಾಗಿ ॥
ಕಾಮದಾಹಕನ ಬಿಲ್ಲು ಮುರಿದರೂ ಕಾಮಜಿಲ್ಲಿನಲ್ಲಿ
ಸೆರೆಗೆ ಸಿಕ್ಕ ಅವ, ಸೀತೆ ಒಲವ ಮಲ್ಲಿಗೆಯ ಬಾಣದಲ್ಲಿ ॥೫೩॥

ಮಾಯೆ ಬಲೆಯ ಬೀ-ಸುತ್ತ ಅಲ್ಲಿ ಜಗ-ವೆಲ್ಲ ಬೀಳಿಸುತ್ತ
ಹೆಸರುವಾಸಿ ಆ ಬುದ್ಧ ಇವನೆ ಸುರ-ಪಕ್ಷಪಾತಿ, ಗೊತ್ತ? ॥
ತ್ರಿಪುರ ಅರಸಿ ಮನ-ಸಲ್ಲಿ ಕಾಮ ಶರ-ವೆನಿಸಿ, ಅವನ ಸೊಗಸು
ತ್ರಿಪುರ ಅಸುರ ಪುರ ಬೀಳಿಸಿದ್ದು ಅ-ಚ್ಚರಿಯೊ, ವಿಪ್ರ! ನೆನೆಸು ॥೫೪॥

ಮುಂದೆ ಕಲಿಯುಗದ ಕೊನೆಗೆ ಇವನೆ ಅವ-ತಾರವೆತ್ತಿ ಬಂದು
ಕತ್ತಿ ಹಿಡಿದು ಕಲಿ-ಕುಲವ ಕೊಂದು ಮೆರಿ-ತಾನೊ ಕಲ್ಕಿ ಎಂದು ॥
ಮ್ಲೇಚ್ಛ ಹೆಣ್ಣುಗಳ ಕಣ್ಣ ಅಣೆಕಟ್ಟು ಒಡೆದು ಧುಮುಕಿ ಬಂದ
ಜಲದಿ ಹೂವ ಮರ ಚಿಗುರಿಸುತ್ತ ಸಂ-ತಾಪ ಕಳೆವ ಜಗದ ॥೫೫॥

ಇತ್ತ ನಿಗಮ, ಗಿರಿ ಹೊತ್ತ , ಇಳೆಯ ಎ-ತ್ತುತ್ತ , ದೈತ್ಯ ಕುತ್ತ
ಜಿತ್ತ , ಬಲಿಯ ಒ-ತ್ತುತ್ತ , ಅರಸರ-ಕ್ಕಸರ ಕತ್ತ ಕಿತ್ತ ॥
ಮುತ್ತ ಗೋಪಿಯರ ಚಿತ್ತ , ತಾಮಸರ ಬೆತ್ತಲಾಗಿಸುತ್ತ ,
ಮತ್ತೆಯವನ ತಲೆ ಕತ್ತರಿಸುತ ಹರಿ ಹತ್ತು ರೂಪಿ, ಗೊತ್ತ ? ॥೫೬॥

ವೇದ ವರ್ಣಿಸುವ, ವಿಧಿಯ ಹೃದಯದಲಿ ಧ್ಯಾನದಲ್ಲಿ ಹೊಳೆವ
ಸಕಲ ವಿದ್ಯೆಗಳ ಧವಳ ಕಳೆಯ ಹಯ-ವದನ ಬಹಳ ಮೆರೆವ ॥
ಅವನ ಬಣ್ಣಿಸಲು ಎನ್ನ ಮಾತು ಮನ-ಸೀಗು ಆಗದಯ್ಯ
ಧರಣಿಕಣವ ಎಣಿ-ಸುವಗು ಅವನ ಗುಣ ಎಣಿಸಲಾಗದಯ್ಯ ॥೫೭॥

ಅರ್ಘ್ಯ ಪಾದ್ಯ ಮೊದ-ಲಾದ ಆದರಕೆ, ಸುಖದಿ ಬಾಷ್ಪ ಉಕ್ಕಿ
ಕೃಷ್ಣ ದರ್ಶನದ ಸುಖವ ಕಳೆದುಕೋ-ಬೇಡ ಕಣ್ಣು ಕುಕ್ಕಿ ॥
ಲಕ್ಷ ವರ್ಷ ಕಡು-ತಪವ ಗೆದು ಮೈ ಸವೆಸಿದಾಗು ಅವನು
ಹೃದಯದಲ್ಲಿ ತುಸು, ಹೊಳೆದರೂನು ಕಂ-ಗಳಿಗೆ ಮತ್ತೆ ಸಿಗನು ॥೫೮॥

ನಿನ್ನ ನೋಡಿ, ವೈ-ದಿಕನು ಎಂದು, ಶಶಿ-ಕಲೆಯ ನಗೆಯ ಬೀರಿ
ವಿನಯ ತೋರಿ, ಸವಿ-ನುಡಿಯ ಸೇರಿ ಸ್ಥಿತಿ-ಗತಿಯ ಕೇಳೆ ಭೂರಿ ॥
ಹರಿಗೆ ಸರಿಯೆ ಉ-ತ್ತರಿಸಿ, ಘನತೆ ಕಾ-ಪಿರಿಸಿ, ನಮ್ಮ ಮನೆಯ
ಸುದ್ದಿ ಹೇಳಿ ಹಿತ-ಮಿತದಿ ನುಡಿದು, ಪರಿ-ಚಯಿಸೊ ಎನ್ನ ವಿಷಯ ॥೫೯॥

ನಾನು ಕೊಟ್ಟ ಕಾ-ಗದವ ಹರಿಯ ಕರ-ಕಮಲದಲ್ಲಿ ನೀಡೊ,
ಹೆಣ್ಣ ಗಂಡುತನ-ವೆಂದು ಅವನ ಬಗೆ, ಬಗೆಯದಂತೆ ಮಾಡೊ ॥

ಜಾಣ ! ಸವಿಯ ನುಡಿ ನುಡಿಯೊ, ನಿನಗೆ ಪ-ತ್ರಾರ್ಥ ಹೇಳ್ವೆ ಇನ್ನು
ಒಳ್ಳೆ ಜನರು ಮು-ಚ್ಚಿಡುವುದಿಲ್ಲ ಒ-ಳ್ಯವಗೆ ಯಾವುದನ್ನೂ ॥೬೦॥

ಹರಿಯು ಮುನಿಸುತಿರೆ, ಮತ್ತೆ ಮನಸು ತುಸು ಬಿಸಿಯ ಗಳಿಸೆ ಚಲಿಸೆ,
ನಾಡು ಹಿಗ್ಗಿಸಲು ಶತ್ರು ನುಗ್ಗಿರಲು ಕೆಂಡವಾಗಿ ಕುದಿಸೆ ॥
ಆಗ ನುಡಿಯದಿರೊ, ಪತ್ರ ನೀಡದಿರೊ, ಸುಮ್ಮನಿದ್ದು ಅಂದು,
ಪಿತ್ತ ಕೆರಳೆ ಮರ-ಗಟ್ಟಿ ನಾಲಿಗೆಯು ಸಿಹಿಯ ಸವಿಯದೆಂದೂ ॥೬೧॥

ಕೃಷ್ಣಪಾದ ಕಾ-ಣುತ್ತ ಹೃದಯ ತಂ-ಪಾಗಿಸುತ್ತ ಆಗ
ಮಾತನಾಡುವಾ ಸಮಯ ನೋಡಿ ಗು-ಟ್ಟಾಗಿ ನುಡಿಯೊ ಬೇಗ ॥
ಹರಿಯು ಬೇರೆ ಕೆಲ-ಸಕ್ಕೆ ಹೊರಡೆ ನುಡಿ-ಬೇಡ ಸಹನೆ ತಾಳು
ತಡನೆ ಆದರೂ, ಕೆಲಸ ಕೆಡಿಸುವುದ-ಕಿಂತ ಸಿದ್ಧಿ ಮಿಗಿಲು ॥೬೨॥

ಇತಿ ಮಧ್ಯಮ ಸಂದೇಶ

ಶ್ರೀ

'ನೀನೆ ಎನ್ನ ಪ್ರಿಯ' ಎಂದು ನುಡಿಯೆ, ಜಾ–ರಿಣಿಯ ಮುಖದ ಮೋಡಿ
'ಬಯಸಿ ಬೆಂದೆ' ಎಂ–ದರುಹೆ, ಕಲುಷ ತೋ–ರುವುದೊ ಧಾರ್ಷ್ಟ್ಯಗೂಡಿ ॥
'ನಾನೆ ಬರುವೆ' ಎಂ–ದನ್ನದಿರಲು ಅ–ಪ್ರೀತಿ ಶಂಕೆ, ಹರಿಯೆ!
ಹುಟ್ಟುಭಿಡೆಯ ಈ ಪುಟ್ಟ ಹುಡುಗಿ ನಿನ–ಗೇನ ಅರುಹೆ ಸರಿಯೆ? ॥೧॥

ಕೇಳಿ ಕೇಳಿ ಗುರು–ಜನರ ಮುಖದಿ ಎಣೆ–ಯಿರದ ನಿನ್ನ ಗುಣವ
ಭಜಿಪ ಜನಕೆ ತ–ನ್ನನ್ನೆ ನೀವ ನಿ–ನ್ನಲ್ಲೆ ಹೃದಯ ಭಾವ ॥
ಮತ್ತೆ ಮನವ ನಿ–ನ್ನಿಂದ ಬೇರೆ ಕಡೆ ಎಳೆಯಲಾಗದೆನಗೆ
ಕಾಂತ! ಕರಿ ಅಯ–ಸ್ಕಾಂತ ಅಪ್ಪಿರುವ ಸೂಜಿ ಬಿಡದ ಹಾಗೆ ॥೨॥

ಗೋಪಿಯರ ಪೀನ ಮೊಲೆಯ ಮಲೆಯ ಕಾ–ಡಲ್ಲಿ ನಡೆವ ನಿನ್ನ
ದಿಟ್ಟ ಕರ ಎನ್ನ ಕರವ ಪಿಡಿದು, ಪುಳ–ಕಿಸಲು ಬರುವುದೇನ ? ॥
ದಾಬ ನೀಗೆ ನೀ–ರುಂಡ ಜಾಣ ಬಿ–ಟ್ಟಾನೊ ಅಮೃತವನ್ನೂ
ಆದರೂ ಹೃದಯ ಕಮರದೆನಗೆ ಗೊ–ತ್ತಿಲ್ಲೊ ಏಕೊ ಇನ್ನೂ ॥೩॥

ಅಣ್ಣ ರುಕ್ಮಿ ನೀ–ನಲ್ಲದವಗೆ ಮೈ–ಮಾತ್ರ ಉಳಿದ ನನ್ನ
ನೀವನಂತೆ ಆ–ಗವನ ತಂಗಿ ಮೈ ಬೆಂಕಿಗಿಳಿಯದೇನ? ॥
ದೀನ ಬಂಧೊ ! ನಿ–ನ್ನಗಲಿ ಯಾರು ಬದು–ಕ್ಯಾರೊ ? ನಾನು ಕಾಣೆ
ಹುಣ್ಣಿಮೆಗೆ ಚಂದ್ರ–ನಂತೆಯೇ ಎನಗೆ ಪ್ರಾಣನಾಥ ನೀನೆ ॥೪॥

"ನನ್ನ ಪ್ರಾಣ, ಹರಿ ! ನಿನ್ನಧೀನ ಅದ–ಕನ್ಯ ಕಣ್ಣುಹಾಕೆ
ಅದರ ರಕ್ಷಣೆಗೆ ಮನಸು ಕೊಡೊ" ಎಂದು, ನಿನಗೆ ಅರುಹಬೇಕೆ ? ॥
ನೀಚ ನರಿ ಜೊಲ್ಲು ಸುರಿಸಿ ನೋಡೆ ಕಾ–ಪಿಡಲು ತನ್ನ ಊಟ
ಆನೆ ಬಗೆವ ಉಗು–ರುಳ್ಳ ಸಿಂಹ ಉಪ–ದೇಶ ಕಾಯೊದುಂಟ ? ॥೫॥

ಜನುಮ ಜನುಮದಾ ಪುಣ್ಯದಿಂದ ದೊರೆ–ವಂಥ ನಿನ್ನ ಸನಿಹ
ನಾನೆ ಬಂದರೇ ಸಾಧು ನಿಂದ್ಯ ಅಭಿ–ಸಾರ ಎಂಬ ಊಹ ॥
ಮನೆಯ ಹೊರಗೆ ಕಾ–ಲಿಡುವುದಂತು ಫಣಿ–ಫಣದ ತುಳಿತವಂತೆ
ಅನ್ಯಗೇಹ ನಡು–ದ್ವೀಪದಂತೆ ಸುಂ–ದರಿಗೆ ದೂರವಂತೆ ॥೬॥

ಹರಿಯೆ! ಕಿವಿವರೆಗೆ ಬರುವ ನಿನ್ನ ಗುಣ–ವನ್ನೆ ಹದೆಯ ಮಾಡಿ
ನಿಗಮ ಗುಂಗಿ ಗುಂ–ಜಿಸಿದ ಸುಘಮ ಯಶ–ಕುಸುಮ ಬಿಲ್ಲು ಮಾಡಿ ॥
ಮತ್ತೆ ನಿನ್ನ ಹೂ–ಬಾಣ ಮಾಡಿ ಹೊಡೆ–ದೆನ್ನ ಗೆದ್ದ ಮದನ
ಬೇಡಿಯಂತೆ ನಿ–ನ್ನಾಸೆ ಬಿಗಿಯೆ ಮನ–ಸೀಗೆ ನಾನು ಊನ ॥೭॥

ನಿನ್ನ ಬಯಕೆಗೇ-ರಿರುವ ಜ್ವರದ ಬಿಸಿ ಕಮ್ಮಿಯಾಗಲೆಂದು
ನಿನ್ನ ಗುಣ ಕಥಾ-ಲಾಪ ಕೊಳದಿ ಮುಳು-ಗಿರಲು ಹಿಂದು ಮುಂದೂ ॥
ವಿಷಮ ಆ ಜ್ವರ ಇಮ್ಮಡಿಸಲು, ಬಲು ಬೇಯುತಿಹನೊ ಒಳಗೆ
ನಿನ್ನ ಕರುಣಪೀ-ಯೂಷ ಹೊರತು ಉಳಿ-ವಾಸೆ ಹೇಗೆ ? ಎನಗೆ ॥೮॥

ಜಟೆಯ ಹಾಗೆ ಮೆರೆ-ದಿದೆಯೊ, ಎನ್ನ ಜಡೆ-ಯಾಗಿ ಮೆರೆದ ಕೇಶ
ಬೂದಿಯಂತೆ ಬಳಿ-ದಿದೆಯೊ ಮೈಗೆ ಜೊ-ನ್ನಂಥ ಗಂಧಶೇಷ ॥
ತೋಳ ಸುತ್ತಿರುವ ನಾಳತಂತು ಕರಿ-ನಾಗವಂತೆ, ಇನ್ನೂ
ಸ್ಮರನ ಹೆದರಿಸಲು ದುಗುಡ ಪಡೆವೆ ಶಿವ ಆದರೂನು ನಾನು ॥೯॥

ಕೃಷ್ಣ! ಕಿರುನಗೆಯ ನೋಟ ಮಿಂಚಿಸುವ ಮೋಡದಂತೆ ನಿನ್ನ
ಚಿತ್ರ ಮೂಡಿಸಿ, ಸ್ತಿಮಿತ ಗೊಳಿಸಿ, ನೆನೆ-ವಾಗಲಂತು ಮುನ್ನ ॥
ಕಣ್ಣಲುದುರಿ, ಕೆಳ-ಗೆನ್ನೆ ಸವರಿ, ಮೊಲೆ-ಯಂಗಳಕ್ಕೆ ಬಂದು
ಧುಮುಕಿ ನಾಭಿ ತುಂ-ಬಿರುವ ಬಾಷ್ಪ ನಿ-ನ್ನೋಡಗೊಡಿಸದಿಂದು ॥೧೦॥

ಮಹಡಿ ಮೇಲೆ ತಂ-ಗಾಳಿ ಪಯಣಕೆದು-ರಾಗಿ ಮುಖವ ಮಾಡಿ
ರೆಪ್ಪೆ ತೆರೆದು ಕ-ಣ್ಣೀರು ಹಿಡಿದು ದ್ವಾ-ರಕೆಯ ದಿಕ್ಕು ನೋಡಿ ॥
ಅಮೃತ ಕಿರಣ ಎಸ-ಳಂತೆ ಅವನ ಸೇ-ವಿಸುತ ಕೇಳುವಾಸೆ
ತಂದನೇನು ? ಸಂ-ದೇಶವನ್ನು ನಿ-ನ್ನಿಂದ ಎಂದು ಎಣಿಸೆ ॥೧೧॥

ಮಹಡಿಯಲಿ ಕೃಷ್ಣ, ದಿಸೆ ದಿಸೆಗು ಕೃಷ್ಣ, ಹಿಂದೆ ಮುಂದೆ ಕೃಷ್ಣ
ಮಂಚದಲಿ ಕೃಷ್ಣ, ಪಥ ಪಥಕು ಕೃಷ್ಣ, ಹೃದಯಮನೆಗು ಕೃಷ್ಣ॥
ಕೃಷ್ಣ ಚಿಂತನೆಗೆ ಎಲ್ಲ ವಸ್ತುಗಳು ಕೃಷ್ಣವಾದರೂನೂ
ಬೆಗಡುವಂತೆ ನಾ ಕೃಷ್ಣೆಯಾಗದೆ, ಬಿಳಿಚಿಕೊಂಡೆ ಇನ್ನೂ ॥೧೨॥

ಸೋತು ನಿನ್ನ ನಗೆ ಕಳೆಗೆ ಚಂದ್ರ, ನಿ-ನ್ನೊಲವು ಕವಿದ ಎನ್ನ
ಕಣ್ಣಕೋರಯಿಸಿ ಚುಚ್ಚುತಿಹನೊ ಮೈ-ಗಿಳಿಸಿ ಕಮಲ ಬಣ್ಣ ॥
ನಿನ್ನ ಮೈ ನೆಳಲ ಕೆಳಗೆ ಸೋತು ಕಳೆ-ಗುಂದಿ ಮೋಡರಾಯ
ಗಟ್ಟಿ ಗುಡುಗಿ ದಯೆ-ಗೊಡದೆ ಒಡೆವ ನಡು-ಗೀಸಿ ಎನ್ನ ಹೃದಯ ॥೧೩॥

ಹರಿಯೆ! ನಗುವ ಸೈ-ದಿಲೆಯ ಸೊಬಗ ಆ ನಿನ್ನ ರೂಪ ಎನ್ನ
ಮನದಿ ಏನೊ ಸುಖ ನೀವುದಿಂದು ಬಲು ದೂರವಿದ್ದರೂನ ॥
ರವಿಯು ದೂರವಿ-ದ್ದಾಗ ಕೂಪ ಅರ-ಳೀತೊ ಕಮಲ ಕೋಗು
ಗುಡುಗು ಕೇಳೆ ನಲಿ-ದೀತು ನವಿಲು ಕಾರ್ಮೋಡ ಕಾಣದಾಗೂ ॥೧೪॥

ಹೆಣ್ಣು ಕುಲವೆ ಕೊಳ-ಕೆಂದು ನಿನಗೆ ಮನ-ದಲ್ಲಿ ಬೇಡ ಶಂಕೆ
ಬೆಂಕಿಗಿಟ್ಟು ಪರಿಶುದ್ಧಳೆಂಬೆ ಜಾನಕಿಯ ಒಂದೆ-ಸಲಕೆ ॥

ಸೀತೆಯರಸ ! ಪ್ರತಿ-ದಿವಸ ನಾನು ಕಾ-ಮಾಗ್ನಿಯಲ್ಲೆ ಪೂರ್ಣ
ಬಿದ್ದು ಬಿದ್ದು ಬಿಸ-ದಂತೆ ಬಿಳಿಚಿಕೊಂ-ಡಿರುವೆ ಸಾಕ್ಷಿ ಮದನ ॥೧೫॥

ಕಾಮ ಬಿಡಲು ಬೆಳ-ದಿಂಗಳೆಂಬ ಆ-ಗ್ನೇಯ ಅಸ್ತ್ರವನ್ನು
ಮುರಿಯಲದನು ವರು-ಣಾಸ್ತ್ರ ಬಿಡುವೆ ಕ-ಣ್ಣೀರು ಸುರಿಸಿ ನಾನು ॥
ಮತ್ತೆ ಮದನ ಭೇ-ದಿಸುತ ಹೃದಯ ಬಾ-ಧಿಸಲು ತಡೆಯಲಾರೆ
ನಿನ್ನ ಕರುಣ ಪೀ-ಯೂಷ ಹೊರತು ಪ್ರತಿ-ಅಸ್ತ್ರ ಕಾಣಲಾರೆ ॥೧೬॥

ಹಲವು ತಿಂಗಳೇ ಉರುಳಿದಾವೂ ನಿನ್ನಲ್ಲೆ ಹೃದಯವಿರಲು,
ಕಾಷ್ಠ ವರ್ಷ, ಕಲ ಯುಗವೂ ಆಗ ಮೂ-ಹೂರ್ತ ಕಲ್ಪ ಓಲು ॥
ಆದರಾಗಲೀ, ಈಗ ನಿಮಿಷವೂ ಸಹಿಸದಂಥ ಪಾಡು,
ಬ್ರಹ್ಮ ಆಯು ಮೀ-ರಿಸಿದೆ, ಎನ್ನ ವ್ಯಥೆ ನೋಡು, ಊಹೆ ಮಾಡು ॥೧೭॥

ಅಗಲಿ ಬೆಂದ ತರು-ಣಿಯರ ಇರಿದ ದೋ-ಷಕ್ಕೆ ಕಪ್ಪು ಚುಕ್ಕೆ
ಬಂತು ಚಂದ್ರನಿಗೆ ಸ್ವಲ್ಪವಂತೆ ಅ-ಲ್ಪಜ್ಞನಾದುದಕ್ಕೆ ॥
ಈಗ ನೀನು ಸ-ರ್ವಜ್ಞನಾಗಿ ನ-ನ್ನಿರಿಯೆ ನೋಟವಿಡದೆ,
ಹೆಚ್ಚಿದಾ ಕರಿಗೆ ಕೃಷ್ಣನೇನೊ ನೀ ! ಕಲುಷ ಒಂದು ಇರದೆ ॥೧೮॥

ನಿನ್ನ ಅಗಲಿ ಬೆಂ-ದಿರುವ ಎನಗೆ ತಂ-ಪುಣಿಸಲೆಂದೆ ಬಹಳ
ದಳಗಳುದುರಿಸುತ, ಮೈಗೆ ಹರವಿಕೊಂ-ಡಿದೆಯೊ ಕೆಂಡಕಮಲ ॥
ಮತ್ತೆ ಬಳಿದ ಮಲೆ-ನಾಡಗಂಧ ಕ್ಷಣ-ದಲ್ಲೆ ಒಣಗಿ ಎನ್ನ
ವಿರಹ ಬೆಂಕಿನಾ-ಲಿಗೆಯು ಆಗೆ, ಸಂ-ತಾಪ ಹೆಚ್ಚದೇನ ? ॥೧೯॥

ಬೇಸಿಗೇಯ ಬಿಸಿ ಕಿರಣ ಹೆಚ್ಚಿ ಚಾ-ತಕಿಯು ಬೇಯುವಂತೆ
ಪುಷ್ಪವೆಂಬ ಕಾ-ಮಾಗ್ನಿ ಶರದಿ ನಾ ಬೆಂದೆ ಇಂತು ಚಿಂತೆ ॥
ಹೇಗೆ ಅದಕೆ ಮಳೆ-ಮೋಡ ತಣಿಸುವುದೊ ಅಮೃತ ಮಳೆಯಸುರಿಸಿ,
ಹಾಗೆ ನೀನು ತಣಿ-ಸೆನ್ನ, ಕರುಣೆ ಕುಡಿ-ನೋಟ ಅಮೃತ ಸುರಿಸಿ ॥೨೦॥

ನಿನ್ನ ಮೈಗೆ ಮೈ ತಾಕಿಸೋಕೆ ನಿ-ನ್ನಲ್ಲೆ ಮನಸು ಕೊಟ್ಟು
ಅಲ್ಲಿ ಚಲುವಿಯರು ನಿನ್ನ ಮೈಯ ಘನ ಕಳೆಗೆ ಮೋಹಪಟ್ಟು
ಇದ್ದರಿರಲಿ, ಓ-ಕೃಷ್ಣ ! ನಿನ್ನ ಮನೆ-ಯಂಗಳಕ್ಕೆ ಸಿಕ್ಕ
ಕಾಲಧೂಳಿ ಗುಡಿ-ಸೋದನಷ್ಟೆ ಬೇ-ಡುವೆನೊ ಕೊನೆಯ ತನಕ ॥೨೧॥

ಬೆಂಗದಿರನ ಕಿರ-ಣಕ್ಕೆ ಕಮಲ ದ-ಬ್ಬಿರುವ ದುಂಬಿಗುಂಪು
ನೋಡಿ ಅದರ ಗುಂ-ಜನದಿ ಮನಕೆ ಇ-ಮ್ಮಡಿಸೆ ವ್ಯಥೆಯ ಕಂಪು ॥
ಮತ್ತೆ ನೈದಿಲೆಯ ನೋಡಿ ನಿನ್ನ ನೀಲ್-ಮೈಯ ನೆನೆಯೆ ಮೂರ್ಛೆ
ಹಗಲಿನಲ್ಲಿ ಹಗ-ಲೆಲ್ಲ ಎನ್ನ ಎ-ಬ್ಬಿಸಲು ದಾಸಿಗಿಚ್ಚೆ ॥೨೨॥

ಜೊನ್ನ ಕವಿದ ಚ-ಕೋರಿಯಂತೆ, ಶರ-ಋತುವಿನಲ್ಲಿ ಸಾಲು
ಹಂಸ ಮುತ್ತಿರುವ ನಲಿದು ನಲಿಯುತಿಹ ಕಮಲಕೊಳದ ಓಲು ॥
ಹರಿಯೆ ನಿನ್ನ ನಗೆ-ಯಂತೆ ಹೊಳೆವ ಯಶ-ಸಿಂದ ಎಂಬುವಂತೆ
ನಿನ್ನ ವಿರಹದಿಂ ಒತ್ತಿ ಮುತ್ತಿ ನಾ ಬಿಳಿಚಿಕೊಂಡೆನಂತೆ ॥೨೩॥

ಬಿಸಿಲಿನಿಂದಲೇ ಮೈಯ ತಾಪ ಹು-ಟ್ಟಿದ್ದು ಎಂದು ತಿಳಿದು
ಅಮೃತಕಿರಣ ಬೆಳ-ದಿಂಗಳೊಡನೆ ನೀ-ರಲ್ಲಿ ಮುಳುಗಿ ಎದ್ದು ॥
ಸ್ಫೋಟಗೊಂಡ ಮು-ತ್ತಿಂದ ಎದ್ದ ಹರ-ಳೆರಚಿಕೊಂಬುದಿಂದು
ಹೃದಯದಲ್ಲಿ ಏ-ನನ್ನೊ ಉರಿಸುತಿದೆ, ನೀನು ಇಲ್ಲವೆಂದು ॥೨೪॥

ಸುಟ್ಟರೂನು ಕಾ-ಮಾಗ್ನಿ ಎನ್ನ ಲಾ-ವಣ್ಯವನ್ನು , ಮತ್ತೆ
ಶಿರಿಷ ಹೂವಿನಂ-ತಿರುವ ಮೃದುಲ ಮನ-ಸಂತು ವಜ್ರದಂತೆ ॥
ಬಯಕೆಗೂಡಿ ನೋ-ವುಂಡ ನಾಡಿ ಎಂ-ದೆಂದು ಮುದುಡದಂತೆ
ಪ್ರಿಯನ ಮಿಲನದಾ ಆಸೆ, ಹೆಣ್ಣಿಗೇ ಬಹಳ ಗಟ್ಟಿಯಂತೆ ॥೨೫॥

ಬಾಡಿಹೋದ ಬಿಸ-ತಿರುಗಿಸಿರಲು ಸಿ-ಟ್ಟಾಗಿ ಚಕ್ರವಾಕ
ಹೂವ ಹಾಸಿಗೆಯ ಒತ್ತಿ ಒರಗೆ ಸಹಿ-ಸದಲೆ ಚಂಚರೀಕ ॥
ನೋಯಿಸುತ್ತೊ , ಮನೆ-ಕೊಳದ ಸೊಳ್ಳೆ ಗು-ಯ್ಯೆಂದು, ಪಿಕವು ಮತ್ತ ,
ಹುರುಪುಗೊಂಡು ನಾ ಹಾಡೆ, ಉರಿದು ಮ-ನ್ಮನಕೆ ವಜ್ರ ಹೊಡಿತ ॥೨೬॥

ತಮಸಿನಂತೆ ಕುಂ-ದುವುದೊ ಎದೆಯು, ಮನ-ಸಂತು ಪದ್ಮಪರಿಯು
ನೋಯುವುದೊ, ಚಂದ್ರ-ಕಾಂತದೋಲು ಕ-ಣ್ಣಿಂದ ನೀರಮಳೆಯು ॥
ಉಸುರ ಗಾಳಿ ಬೆಳೆ-ದೀತೊ, ಕಡಲ ಅಲೆ-ಅಲೆಯ ಬುಗ್ಗೆ ಹಾಗೆ
ಚಂದ್ರ ಬೆಳಗಿರಲು ಮನಸು ಉಳಿವುದೇ ? ಕೋಕಿಯಂತೆ ಎನಗೆ ? ॥೨೭॥

ನಿನ್ನ ಹೆಸರೆ ಈ ದಾಸಿಯರಿಗು, ಏ-ಕಾಂತ ನಿನ್ನ ಜೊತೆಗೇ,
ನಿನ್ನ ಮಿಲನ ಸಾ-ಧಿಸಲು ಸಕಲೋ-ಪಾಯ ಚಿಂತೆ ಒಳಗೆ ॥
ನಿನ್ನ ಸುದ್ದಿ ತಿಳಿ-ವಲ್ಲೆ ಮುಳುಗಿದೆಯೊ ಎಲ್ಲ ಪ್ರಶ್ನೆ ಸೊಗಸು
ನಿನ್ನ ನಿಷ್ಕಲುಷ ದಿವ್ಯ ರೂಪ ಸೌಂ-ದರ್ಯದಲ್ಲೆ ಕನಸು ॥೨೮॥

ಹೂವ ಮಾಲೆ ಮುಡಿ-ಗಿಡಲು ಎನಗೆ ತಲೆ-ಭಾರ, ತಾಳಲಾರೆ
ಮೈಗೆ ಬಳಿದ ಶ್ರೀ-ಗಂಧ ಬಂಡೆಯಂ-ತಾಗಿ ಧರಿಸಲಾರೆ ॥
ದೀಪ ಬೆಳಕು ಹರ-ಡೋದು ಕೂಡ ಕ-ಣ್ಣಿಟ್ಟು ನೋಡಲಾರೆ,
ವಿರಹ ಬೆಂಕಿ ನಾ-ಲಿಗೆಯ ಹೇಗೆ ಸಹಿ-ಸೋದು? ತಿಳಿಯಲಾರೆ ॥೨೯॥

ಮೈಯ ಬಳ್ಳಿ ಹಾ-ರೀತು ಎಂದು ನೀ-ರೆಲೆಯು ಬೀಸುತಿಲ್ಲ
ಮತ್ತೆ ಒಡೆದು ಹೋ-ದೀತು ಎಂದು ಶ್ರೀ-ಗಂಧ ಲೇಪವಿಲ್ಲ ॥

ಹೆದರಿ ಹೃದಯ ಸೀ-ಳೀತು ಎಂದು ಎದೆಗಸಳು ಹರಡುತಿಲ್ಲ
ನನ್ನ ಈ ಪ್ರೇಮ ಹುಚ್ಚು ಹೇಗೆ ಕಳೆ-ದೀತೊ ? ತಿಳಿಯುತಿಲ್ಲ ॥೩.೦॥

ಹಾವಿನೊಡೆಯ ಭೂ-ಭಾರ ಹೊತ್ತು ತಲೆ-ಭಾರಕಾರ್ತನಹುದು,
ಪಕ್ಷಿರಾಜನಿಗೆ ಭಕ್ಷ್ಯನಾಗಿ ಬದು-ಕ್ಯಾನೊ ಗಾಳಿಕುಡಿದು ॥
ಎರಡು ನಾಲಿಗೆಯ, ವಿಷದ ಜೊಲ್ಲ, ಕೆಂ-ಗಣ್ಣ ಮಾರಿಯವನು
ಇಂಥ ವರನ ವಧು ಏನು ಬಯಸಿ ವರಿ-ಸ್ಯಾಳೊ? ಹೇಳು ನೀನು ॥೩.೧॥

ಸಗ್ಗದೊಡೆಯ ಪರ-ನಾರಿಯನ್ನು ಕ-ಣ್ಣಾಕಿ ಕೆಡಿಸುವಾತ
ರೋಗಗ್ರಸ್ತ ಮೈ-ಯಾತ ಮತ್ತೆ ದೈ-ತ್ಯರಿಗೆ ಸೋಲುವಾತ ॥
ತಪಸುಗೈವ ಸ-ಜ್ಜನರ ನಿತ್ಯ ಸಹಿ-ಸೋದೆ ಇಲ್ಲವಂತೆ
ಯಾವ ಶೀಲವತಿ ಅರಸುಕುವರಿಗೂ ಅವನು ಬೇಡವಂತೆ ॥೩.೨॥

ಗಿರಿಜೆ ಬಿಗಿದು ಅ-ಪ್ಪಿರಲು ಅರ್ಧ ಹೆ-ಣ್ಣಾದ ಗಂಡು ಈತ
ಸುತ್ತ ಭೂತ, ಸುಡು-ಗಾಡು ವಸಥ, ಕಾ-ಮನ್ನ ಸುಡುವ ಮತ್ತ ॥
ಸಿಡುಕ, ಮೈಗೆ ಬಳಿ-ದಾನೊ ಬೂದಿ, ಹೊ-ತ್ತಾನೊ ರುಂಡಮಾಲೆ
ಸದಭಿರುಚಿಯ ತೊರೆ-ದಂಥ ಶಿವನ ವರಿ-ಸ್ಯಾಳು ಯಾವ ಬಾಲೆ? ॥೩.೩॥

ಬ್ರಹ್ಮ ತನ್ನ ಮಗ-ಳನ್ನೆ ಬಯಸಿದವ-ನೆಂದು ಸುದ್ದಿ ಕೇಳ್ವೆ
ಜಗದ ಅಜ್ಜ ಅವ-ನೆಂದು ಮೌನಿ ಮುಖ-ದಿಂದ ನಿಜವ ತಿಳಿವೆ ॥
ಆದ್ದರಿಂದ ಪಶು-ಸದೃಶರೊಡನೆ ಪಿತ-ರೊಡನೆ ಲಗ್ನ ಸಲ್ಲ
ಎಂದು ತಿಳಿದು ಆ ಬೊಮ್ಮ ಸನಿಹ ಎಂ-ದೆಂದು ಬೇಡುತಿಲ್ಲ ॥೩.೪॥

ಇತರ ಸುರರು ದಿತಿ ಸುತರ ಪೀಡೆ ಪಡೆ-ದಾರೊ ಬಹಳವಂತೆ
ಅವರ ಬಲವು ಪರಿ-ಮಿತವೊ ಆತ್ಮರ-ಕ್ಷಣೆಗು ಬಾರದಂತೆ ॥
ಸ್ವೋತ್ತಮರಿಗೆ ಅಪ-ರಾಧವೆಸಗಿ ಭೂ-ತಲಕೆ ಪತಿತರಂತೆ
ಹೇಳು ಅವರ ಕರ ಪಿಡಿವೆ ಹೇಗೆ ? ಮ-ತ್ತಾವ ಆಸೆಗಂತೆ ? ॥೩.೫॥

ಪ್ರೇತ ರಕ್ಕಸರ ಅರಸು ಕುಲದ ದಾ-ನವರ ಬಯಸಬೇಕೆ ?
ಜನಕ ಸದೃಶ ಮುನಿ-ಜನಕೆ ಕಾಮಿನಿಯ ಕಾಮ ಸಲ್ಲಬೇಕೆ ?
ಸುರರ ಪಾಡೆ ಹೀ-ಗಿರಲು ಮನುಜ ದೊರೆ-ಗಂತು ನಾಯಿಪಾಡು
ಎಂದು ನಿರ್ಧರಿಸಿ ಎಲ್ಲ ತೊರೆದು ಮೊರೆ-ಯಿಡುವೆ ನಿನಗೆ ನೋಡು ॥೩.೬॥

ದೋಷ ಸೋಕದಿಹ ಸುಗುಣ ಗಡಣ ಕ್ಷೀ-ಣಿಸದು ನಿನಗೆ ನಿತ್ಯ
ಶರಣು ಹೊಕ್ಕವಗೆ ನೀನೆ ಕರುಣದಲಿ ಕಲ್ಪವೃಕ್ಷ ಸತ್ಯ ॥
ಬೇರೆ ಎಲ್ಲರೂ ಊನರೆಂದು ಶ್ರುತಿ-ಗೀತೆಯಲ್ಲಿ ಕೇಳಿ
ನಾನು ಮುನ್ನ ನಿ-ನ್ನನ್ನೆ ಮೆಚ್ಚಿ ಬೇ-ಡುವೆನೊ ಕಾಮಕೇಳಿ ॥೩.೭॥

ಆಟದಲ್ಲಿ ಆ-ಸಕ್ತಿ ಇಲ್ಲ ಸಿಂ-ಗಾರ ಸೇರುತಿಲ್ಲ
ಊಟವಂತು ರುಚಿ-ಸೋದೆ ಇಲ್ಲ ನಗೆ-ಚಾಟಿ ಒಗ್ಗುತಿಲಲ್ಲ॥
ನಿತ್ಯ ಎಲ್ಲೆಡೆಗು ನಿನ್ನ ಪದಪದುಮ ಹೃದಯ ತುಂಬಿ ಇಡುವೆ
ನಿನ್ನ ಧೇನಿಸುತ ವಿಷಯ ತೊರೆದು ಯೋಗಿನಿಯ ಹಾಗೆ ಇರುವೆ ॥೩೮॥

ಹೃದಯ ಸೆರೆ ಹಿಡಿದ ವೈರಿ ಸ್ಮರನ ಏ-ನೊಂದು ಬೇಡೊದಿಲ್ಲ
ಎನ್ನ ಗೋಳಿಡುವ, ಅವನ ಪ್ರಿಯಗೆಳೆಯ ಶಶಿಯ ಕೇಳೊದಿಲ್ಲ॥
ಶತ್ರುವಾದರೂ ಬೇಡ್ವೆ ಮಾರುತನ, ಕಾಮ ಸಿಡಿಲು ಬಡಿದು
ಸುಟ್ಟ ಎನ್ನ ಕೆಂ-ಬೂದಿ ದ್ವಾರಕೆಯ ದಿಸೆಗೆ ಹರಡು ಎಂದು ॥೩೯॥

ಆಗಲಿ ಉರಿವ ಕಾ-ಮಾಗ್ನಿ ಆರಿಸಲು ನಿನ್ನ ಕರಣಸಿಂಧು
ಒಂದು ಬಿಂದು ಸಾ-ಕೆಂದು ಅಂದುಕೊಂ-ಡಿದ್ದೆ ಮನದೊಳಂದು ॥
ಆದರೊಂದು ಹನಿ-ಕೂಡ ಸಿಗದು, ಏ-ನೇನು ಚಿಂತಿಗೈದೂ
ಕುಡಿದನಾರು ನಿ-ನ್ನ ಮಿತ ಕರುಣ ಪಾ-ಲ್ಗಡಲ ಪೂರ್ಣ ಇಂದು ॥೪೦॥

ಹರಿಯೆ ! ಪ್ರಾಣ ತೆ-ತ್ತಾದರೂನು, ಸುಖ-ವನ್ನು ಪಡೆವೆ ನಾನು
ಕಾಮ ಬೆಂಕಿ ಬೇ-ಯಿಸಲು, ಎಷ್ಟು ಸಹಿ-ಸೇನು ದುಃಖವನ್ನು ॥
''ನನ್ನ ಆಗಲಿ ನನ-ಗಾಗಿ ರುಕ್ಮಿಣಿಯು ಪ್ರಾಣ ಬಿಟ್ಟ''ಳೆಂಬ
ಸುದ್ದಿಯಾದರೂ ನಿನಗೆ ಕೇಳಿದರೆ, ನಾನು ಧನ್ಯೆ ತುಂಬ ॥೪೧॥

ನೀನು ಎಲ್ಲ ಬ-ಲ್ಲಿದರು ನಿನ್ನ ಒಳ-ಗೆಲ್ಲ ಇದ್ದರೂನು
ಎನ್ನ ಕಣ್ಣು ಕರೆ-ದಿರುವ ಅತಿಥಿ ಈ ನೋವು ತಪ್ಪಿತೇನು ?॥
ನಿನ್ನ ಪ್ರೇಮ ಸಂ-ಕೋಲೆ ಬಿಗಿದು ತಳ-ಮಳಿಸಿ ದಣಿವೆ ನಾನು
ವಿಧಿಯ ಆಟ ತ-ಪ್ಪೋದು ಕಷ್ಟ ಮ-ತ್ತೇನು ತಿಳಿಯೆ ಇನ್ನು ॥೪೨॥

ಸ್ಪರ್ಶ ಮಾತ್ರದಲಿ ಲೋಕ ಊಹಿಸದ ಸುಖವ ನೀವ ನಿನ್ನ
ಕುಸುಮ ಕೋಮಲದ ಪಾದಕಮಲ ತೊಡೆ-ಯಲ್ಲಿ ಇಟ್ಟು ಮುನ್ನ ॥
ಒಲವು ಉಕ್ಕಿಸಿದ ನಯನ ವರ್ಷಿಸಿದ ಅಮೃತದಲ್ಲಿ ತೊಳೆದು
ಎಂದು ನಾನು ಅದ-ನೊತ್ತುವೇನು ? ಕೈ-ತುಂಬ ಹಿಡಿದು ಹಿಡಿದು ॥೪೩॥

ನಿನ್ನ ಎದೆಯ ನಿಮಿ-ರಾದ ರೋಮದಲಿ ತೋಳತೆಕ್ಕೆ ಒಳಗೆ
ನನ್ನ ಮಂದ ಆ-ಕ್ರಾಂತ ಬಳ್ಳಿ ಮೈ , ಬಾಗಿ ಬಿಗಿವುದ್ಹೇಗೆ ? ॥
ಅದಕೆ ನೀನು ಬಿಗಿ-ದಪ್ಪಿ ಉಜ್ಜಿ ತುದಿ-ಮೊಲೆಯ ಕುಣಿಸಿ ತಣಿಸಿ
ಪುಳಕಗೊಳಿಸಿ ಮನ-ಮೋದಿಸುವುದು ಎಂ-ದುಂಟು ? ಹೇಳೊ ಎಣಿಸಿ ॥೪೪॥

ನನ್ನ ಅಧರ ಸುಧೆ ಸವಿಯಲೆಂದು, ಸೀ-ತ್ಕಾರನಾದಗೈದು
ನನ್ನ ಕಿವಿಯ ಸುಧೆ-ಯಿಂದ ತುಂಬುವಿಯೊ ಎಂದು? ಮುಂದೆ ಬಂದು ॥

ಕಾಮ ತಪ್ತ ಗೋ–ಪಿಯರ ಮನಕೆ ಆ ನಾದ ಜೀವವಂತೆ
ಬೇಸಿಗೆಯ ಬಿಸಿಗೆ ಬೆಂದ ಚಾತಕಿಗೆ ಮೇಘನಾದದಂತೆ ॥೪೫॥

ಹೃದಯ ಉಕ್ಕಿಸಿದ ಒಲವು ಸೇರಿ ಕೆಂ–ಪೇನೊ! ಅಧರ ಮಣಿಯು
ಎಂದು ? ನಿನ್ನ ಹ–ಲ್ಲೂರಿ, ಗೀರಿ, ಆ–ದೀತು ಭೂರ್ಜದೆಲೆಯು ॥
ಆಗ ನನ್ನ ಕೆಂ–ದುಟಿಗೆ ಮೂಡಿರುವ ಎಂಟು ಗೆರೆಯ ನಂಟು
ಬ್ರಹ್ಮ ಬರೆದ ಶುಭ ಅಷ್ಟವರ್ಗ ಗೆರೆಯಂತೆ ಹೊಳೆವುದುಂಟು ॥೪೬॥

ನೆರಿಗೆ ಗಂಟು ಸಡಿ–ಲಾಗಿ ಸೀರೆ ಸರಿ–ದಾಗ ಅಂದವಾದ
ಕಟಿಯ ಸುತ್ತ ಕರ–ಕಮಲವಿಡಲು ಮನ–ದಲ್ಲಿ ನಾಚಿಹೋದ ॥
ಸುಮ್ಮ ಬಾಗಿರುವ ನನ್ನ ಮುಖವ ಕೈ–ಯಿಂದ ಎತ್ತಿ ಮುತ್ತಿ
ಚುಂಬಿಸುತ್ತ ಸುಖ–ನೀವೆ ಎಂದು ? ಕೋಲ್ಮೈಯ ನಡುಗಿಸುತ್ತಿ ? ॥೪೭॥

ಭ್ರೂ–ಬಿಲ್ಲಿನಲ್ಲಿ ಕುಡಿ–ನೋಟ ಬಾಣ, ಹೂ–ಡುತ್ತ ಸೆಳೆದು ಬಿಟ್ಟು
ಮೊಲೆ–ಮಲೆಗಳಲ್ಲಿ ಮ–ನ್ಮಥನ ಖೋಲಿ ಮು–ತ್ತಿಟ್ಟು ಏಟುಕೊಟ್ಟು ॥
ಸಿ–ಟ್ಟಾದ ಹಾಗೆ ಮನ–ಸಿಂದ ಹೊರಗೆ ಕೆಂ–ಪಾಗಿ ಬಂದ ಅವನ
ನೀ ಗೆಲ್ಲು, ಹಲ್ಲು ಶ–ಸ್ತ್ರಕ್ಕೆ ಕೊಲ್ಲು, ಕೆಂ–ದುಟಿಯ ಕಡಿದು, ಜಾಣ ॥೪೮॥

ಹೇಗೆ ಅಪ್ಪಿದರೆ ನುಸುಳದೀತೊ ಹೂ–ಬಾಣ ಬಾಣ ಒಂದೂ
ಹಾಗೆ ಎನಗೆ ಬಿಗಿ–ಅಪ್ಪುಗೆಯ ಕರು–ಣಿಸು ಕರುಣಸಿಂಧು ! ॥
ತೋಳು ಬಿಗಿದ ಮೈ ಒಳಗೆ ಸೇರಿ ಒಂ–ದಾಗಲೀಡು ಹೃದಯ
ನಿನ್ನ ಎದೆಗೆ ಈ ನನ್ನ ದುಂಡು ಮೊಲೆ ದಾಸಿಯಾಗಲಯ್ಯ ॥೪೯॥

ಯೋಗಿಗಳು ನಿತ್ಯ ಮನಸಿನೊಳಗೆ ಹರಿ–ಧ್ಯಾನ ಮಾಡುವಂತೆ
ಕೊಚ್ಚೆಯಲ್ಲಿರುವ ರಾಜಹಂಸಿ ಮಾ–ನಸವ ಬಯಸುವಂತೆ ॥
ಹರಿಯೆ! ತೊರೆದು ಪರಿ–ವಾರವೆಲ್ಲ, ಪ್ರಿಯ–ನಾದ ನಿನ್ನ ಮಾತ್ರ
ನಿತ್ಯ ಒಳಗೆ ಚಿಂ–ತಿಸುವೆ, ಎನಗೆ ನೀ ಒಲಿಯೊ ಬೇಗ ಹತ್ರ ॥೫೦॥

ನನ್ನ ಪಡೆವುದಕೆ ಮಗಧನೊಡನೆ ಶಿಶು–ಪಾಲ ಬರುವನಂತೆ
ಮತ್ತೆ ಸ್ವಸ್ತಿ ಪು–ಣ್ಯಾಹ ಮೊದಲ ಸ–ತ್ಕಾರ್ಯ ಮಾಡ್ವನಂತೆ ॥
ಇದಕೆ ಮುಂಚೆ ಕುಲ–ಧರ್ಮವಾದ ಪಾ–ರ್ವತಿಯ ಪೂಜೆಗೆಂದು
ವಸತಿಯಿಂದ ಹೊರ–ಬಂದ ನನ್ನ ಸುಖ–ಗೊಳಿಸು ನೋಡಿ ಅಂದು ॥೫೧॥

ನಮಿಸಿ ಪಾರ್ವತಿಗೆ, ಗುಡಿಯ ಹೊರಗೆ ನಾ ಬರುವೆ ತೋಳನೆತ್ತಿ
ನಿನ್ನ ಎದುರು ಕರ ಜೋಡಿಸುತ್ತ ಪ್ರಾ–ರ್ಥಿಸುವೆ ದೈನ್ಯ ಒತ್ತಿ ॥
ಆಗ ನೀನು ಚ–ಕ್ರಾದಿ ಚಿನ್ಹೆ ಮೂ–ಡಿರುವ ಕರದಿ ನನ್ನ
ಸೆಳೆದು ಕುದುರೆ ರಥ ಹತ್ತಿಸುತ್ತ ಬಿ–ಕ್ಕೊಂಡು ನಡೆಯೊ ಮುನ್ನ ॥೫೨॥

ಒಡೆಯ ! ಹೀಗೆ ನೀ ಮಾಡದಿದ್ದರೆ, ನಿನ್ನ ಕಾದು ಕಾದು
ಒಳಗೆ ಚಿಂತೆ ನೂ-ರಾರು ಬೆಳೆದು ಆ-ಹಾರ ನಿದ್ದೆ ತೊರೆದು ॥
ಪ್ರಾಣ ಬಿಡುವೆ. ವೈ-ದಿಕರ ವೇದ ಕರು-ಣಾಳು ನೀನೆ ಎಂದು
ಸಾರುತಿವೆಯೊ, ನಂ-ಬಿರುವೆ ನೀನು ನಿ-ರ್ದಯನು ಆಗನೆಂದು ॥೫೩॥

ಚಕ್ರವಾಕ ರವಿ-ಯನ್ನು , ಚಾತಕಿಯು ಖುಷಿಸಿ ಮೋಡವನ್ನು
ಜೇನುಗುಂಪು ಕೊಳ-ವನ್ನು , ಕೋಗಿಲೆಯು ಚಿಗುರು ಮಾವಿನನ್ನು ॥
ನೋಡುವಂತೆ ನಾ ನಿನ್ನ ನೋಡಿ ಉ-ತ್ಸಾಹ ಪುಳಕ ಪಡೆವೆ
ಎಂದು ನಮ್ಮ ಶುಭ-ಮಿಲನ ? ಅಂಥ ಶುಭ-ದಿವಸ ಧನ್ಯ ಅಲ್ವೆ ॥೫೪॥

ವಿಪ್ರ ಇಷ್ಟು ಬರೆ-ದಿರುವೆ, ಪತ್ರದಲಿ ಗೌಪ್ಯವಿಷಯವನ್ನು
ಕಾಮ ರೋಗ ಪರಿ-ಹರಿಪ ಹರಿಗೆ ಈ ಪತ್ರ ನೀಡು ಇನ್ನೂ ॥
ಮಾತುಗಾರ ! ಮಾ-ತಾಡೊ ಮಧುರ, ಆ ಹರಿಯ ಹೃದಯವನ್ನು
ನನ್ನ ಮೇಲೆ ತರು-ವಲ್ಲಿ ಚತುರ ನೀ-ನೆಂದು ಬಲ್ಲೆ ನಾನು ॥೫೫॥

ಅವಳ ಅಪ್ಪಣೆಯ ಶಿರದಿ ಧರಿಸಿ ದ್ವಾ-ರಕೆಗೆ ಬೇಗ ಓಡಿ,
ಹರಿಯ ನೋಡಿ, ಖುಷಿ-ಗೂಡಿ, ಮನದಿ ಆ ಪತ್ರ ಅವಗೆ ನೀಡಿ ॥
ವಿಪ್ರ ರಾಜ ಒಲ-ವುಳ್ಳ ಅವಳ ಸಂ-ದೇಶ ನುಡಿದನಂತೆ
ರಾಘವಂಗೆ ಕಪಿ-ರಾಜ ಸೀತೆ ಸಂ-ದೇಶ ಅರುಹಿದಂತೆ ॥೫೬॥

ದ್ವಿಜನ ಸರಸ ನುಡಿ ಕೇಳಿದೊಡನೆ ಪ-ತ್ರಾರ್ಥ ಕೂಡ ತಿಳಿದು
ರಾಮ ರಕ್ಕಸರ ಮುರಿದ ಹಾಗೆ ಶಿಶು-ಪಾಲ ಕೂಟ ಮುರಿದು ॥
ಸೀತೆಯಂತೆ ರು-ಕ್ಮಿಣಿಯ ಸಲಹಿ ಕರ-ಕಮಲದಿಂದ ಕೃಷ್ಣ
ಪುಳಕಿಸುತ್ತ ಅವ-ಳೊಡನೆ ವಿಹರಿಸಿದ. ನಿತ್ಯ ತೃಪ್ತ ಪೂರ್ಣ ॥೫೭॥

ವಿರತಿ ಮೊದಲು ಗುಣ-ದಿಂದ 'ಸಾತ್ವಿಕರು' ಎಂದೆ ಹೆಸರು ಪಡೆದ
ಶಾಸ್ತ್ರವೇತ್ತ ಗುರು-ರಾಜವರ್ಯ ಬುಧ-ರಿಂದ ಜನ್ಮ ಪಡೆದ ॥
ಸಕಲ ವಿದ್ಯೆ ಸ-ದ್ಧ್ಯಾನ ಮೌನಿವರ-ರಿಂದ ಮುದದಿ ಪಡೆದ
ಶ್ರೀನಿವಾಸ ಕವಿ ಹರಿಯ ಒಲಿಸಲೀ-ಕಾವ್ಯವನ್ನು ಬರೆದ ॥೫೮॥

ಶ್ರೀ ಮಧ್ವಾಂತರ್ಗತ ಶ್ರೀ ಕೃಷ್ಣಾರ್ಪಣಮಸ್ತು

ಶಂಖ ಮುದ್ರೆ ಜಪ-ಮಾಲೆ ಪುಸ್ತಕವ ಕಮಲಕೈಗಳಿಂದ
ಪಿಡಿದು ಬ್ರಹ್ಮಗೆದು-ರಾಗಿ ಸಾಂಗ ಆ-ಮ್ನಾಯವೆಲ್ಲ ನುಡಿದ ॥
ಅಮೃತ ಕಿರಣ ಚಂ-ದಿರನ ಪರಿಯೆ ಪರಿ-ತಾಪ ಜಗದಿ ಕಳೆದ
ತುರಗ ಮುಖನ ಮೂ-ರುತಿಯು ಮನದಿ ಹೊಳೆ-ದಿರಲಿ ಬಹಳ ಚೆಂದ ॥

ಶ್ರೀ ಕೃಷ್ಣಾರ್ಪಣಮಸ್ತು

॥ श्रीगुरुराजो विजयते ॥

## श्लोकसूची